ಬಾಲಧನ್ವಿ ವೇಂಕಟಾರ್ಯ ಗ್ರಂಥಮಾಲಾ ೧೮ ನೇ ಸುಮ :

ಶ್ರೀ ವಿಷ್ಣುಪುರಾಣಾಂತರ್ಗತ

# ಯಮಕಿಂಕರ ಸಂವಾದದ ಕನ್ನಡ ವ್ಯಾಖ್ಯಾನ

ಸಾಹಿತ್ಯ ವೇದಾನ್ತ ವಿದ್ವಾನ್ ಮೈಸೂರು ಶ್ರೀಮನ್ಮಹಾರಾಜ
ಸಂಸ್ಕೃತ ಕಾಲೇಜ್ ವಿಶಿಷ್ಟಾದ್ವೈತ ವೇದಾನ್ತಮುಖ್ಯಾಧ್ಯಾಪಕ
ಶ್ರೀ ಬಾಲಧನ್ವಿ ಜಗ್ಗು ಸುದರ್ಶನಾಚಾರ್ಯ ರಚಿತ

ಸಾಹಿತ್ಯರತ್ನಂ–ಶಾಸ್ತ್ರಕವಿರತ್ನಂ–ಆಸ್ಥಾನಮಹಾವಿದ್ವಾನ್,
ಸಾಹಿತ್ಯಾಲಂಕಾರ ಸಾಂಖ್ಯಯೋಗ ವೇದಾನ್ತ
ವಿದ್ವಾನ್ ಸಾಂಖ್ಯತೀರ್ಥಂ
ಶ್ರೀ ಬಾಲಧನ್ವಿ ಜಗ್ಗು ವೆಂಕಟಾಚಾರ್ಯ ರಚಿತ
ಸಂಸ್ಕೃತ ವ್ಯಾಖ್ಯಾನದ ಅನುವಾದ

*Author & Publisher*
**Baladhanvi Jaggu Sudarsanacharya,**
**Sahitya Vedanta Vidwan**
**Head of the Department of Visishtadvaita Vedanta**
**Maharaja's Samskrita College, MYSORE.**
**1966**

ಬಾಲಧನ್ವಿ ವೇಂಕಟಾರ್ಯ ಗ್ರಂಥಮಾಲಾ ೧೮ ನೇ ಸುಮ :

ಶ್ರೀ ವಿಷ್ಣು ಪುರಾಣಾಂತರ್ಗತ

# ಯಮಕಿಂಕರ ಸಂವಾದದ ಕನ್ನಡ ವ್ಯಾಖ್ಯಾನ

ಸಾಹಿತ್ಯ ವೇದಾನ್ತ ವಿದ್ವಾನ್ ಮೈಸೂರು ಶ್ರೀಮನ್ಮಹಾರಾಜ
ಸಂಸ್ಕೃತ ಕಾಲೇಜ್ ವಿಶಿಷ್ಟಾದ್ವೈತ ವೇದಾನ್ತಮುಖ್ಯಾಧ್ಯಾಪಕ
ಶ್ರೀ ಬಾಲಧನ್ವಿ ಜಗ್ಗು ಸುದರ್ಶನಾಚಾರ್ಯ ರಚಿತ

—

ಸಾಹಿತ್ಯರತ್ನಂ-ಶಾಸ್ತ್ರಕವಿರತ್ನಂ-ಆಸ್ಥಾನಮಹಾವಿದ್ವಾನ್,
ಸಾಹಿತ್ಯಾಲಂಕಾರ ಸಾಂಖ್ಯಯೋಗ ವೇದಾನ್ತ
ವಿದ್ವಾನ್ ಸಾಂಖ್ಯತೀರ್ಥಂ

ಶ್ರೀ ಬಾಲಧನ್ವಿ ಜಗ್ಗುವೆಂಕಟಾಚಾರ್ಯ ರಚಿತ
ಸಂಸ್ಕೃತ ವ್ಯಾಖ್ಯಾನಾನುವಾದ

**Editor & Publisher**
Baladhanvi Jaggu Sudarsanacharya,
Sahitya Vedanta Vidwan
Head of the Department of Visishtadvaita Vedanta
Maharaja's Samskrita College, MYSORE.
1966

1966
ಮೊದಲನೇ ಮುದ್ರಣ



ಪುಸ್ತಕ ಸಿಗುವ ಸ್ಥಳ :—
ಬಾಲಧನ್ವಿ ಜಗ್ಗು ಸುದರ್ಶನಾಚಾರ್ಯ
ಸಾಹಿತ್ಯ ವೇದಾಂತ ವಿದ್ವಾನ್
" ಭಕ್ತಿ ವಿಲಾಸ "
ಮೇಲುಕೋಟೆ ಪೋಸ್ಟ್, ಮಂಡ್ಯ ಡಿಸ್ಟ್ರಿಕ್ಟ್,
ಮೈಸೂರುಸ್ಟೇಟ್.

ಮುದ್ರಕರು :
ಅಶ್ವಿನಿ ಪ್ರಿಂಟರ್ಸ್,
ನ್ಯೂ ಸಯ್ಯಾಜಿರಾವ್ ರೋಡ್,
ಮೈಸೂರು-4.

## ಶ್ರೀ ಬಾಲಧನ್ವಿ ಜಗನ್ನ ವೆಂಕಟಾಚಾರ್ಯವಿರಚಿತ ಗ್ರಂಥಗಳಲ್ಲಿ ಅಮುದ್ರಿತವಾದವು

1) ಋಣಿವೋಚನ ಸ್ತೋತ್ರಂ ಪದ್ಯಗ್ರಂಥ
2) ಋತುವರ್ಣನಂ ,,
3) ಅನ್ಯೋಕ್ತಿಮಾಲಾ ,,
4) ಮುಕ್ತಕ ಶ್ಲೋಕ ಕದಂಬಂ ,,
5) ಯದುಗಿರಿ ಯತಿರಾಜ ಮಂದಸ್ಮಿತಂ ಸವ್ಯಾಖ್ಯಂ ,,
6) ಪುರುಷ ಕಾರ ವೈಭವಂ (ಲಕ್ಷ್ಮೀಸ್ತುತಿ) ಸಟೀಕ ,,
7) ಗ್ರಂಥಿ ಜ್ವರ ಚರಿತಂ ,,
8) ಶ್ರೀ ನೃಸಿಂಹಸ್ತುತಿಃ ,,
9) ಗೀತಾರ್ಥ ಸಂಗ್ರಹ ವ್ಯಾಖ್ಯಾ ,,
10) ಶ್ರೀಕೃಷ್ಣಜಯಂತೀ ನಿರ್ಣಯಃ ,,
,,

11) ಶ್ರೀ ದಿವ್ಯಸೂರಿ ಚರಿತಾನಿ ಗದ್ಯ

1) ಪ್ರಥಮ ಸೂರಿತ್ರಯ ಚರಿತಂ
2) ಶಠಕೋಪಸೂರಿಚರಿತಂ
3) ಭಟ್ಟನಾಥ ಚರಿತಂ
4) ಭಕ್ತಿಸಾರ ಚರಿತಂ
5) ಭಕ್ತಾಂಘ್ರಿರೇಣು ಚರಿತಂ
6) ಕುಲಶೇಖರ ಚರಿತಂ
7) ಪಾಣಸೂರಿ ಚರಿತಂ
8) ಪರಕಾಲ ಚರಿತಂ
9) ಶ್ರೀ ಗೋದಾ ಚರಿತಂ
10) ಶ್ರೀವತ್ಸಚಿಹ್ನಮಿಶ್ರ ಚರಿತಂ

11) ಆಂಧ್ರ ಪೂರ್ಣ ಚರಿತಂ [ಪದ್ಯ]
12) ಕೇಶವಾದಿ ದ್ವಾದಶಮೂರ್ತಿ ಸ್ತೋತ್ರಂ [ಪದ್ಯ]
13) ದಶಾವತಾರ ಸ್ತುತಿಃ [ಪದ್ಯ]
14) ಯುವಚರಿತಂ [ನಾಟಕ]
15) ಶಾರೀರಕಾಧಿಕರಣ ಮಾಲಿಕಾ
16) ಶ್ರೀ ಭಾಷ್ಯಸ್ಯ ಪ್ರಪತ್ತ್ಯೇಕ ಪರತ್ವಂ
17) ಶ್ರೀ ವೇದಾಂತಾಚಾರ್ಯಾಣಾಮವಸ್ಥಾ ದ್ವಯಂ

## 18 ಉಭಯ ಕಲಾ ಸಂಪ್ರದಾಯ ಭೇದಗಳು

1) ಭಗವತ್ಕೃಪಾಯಾಃ ನಿರ್ಹೇತುಕತ್ವಂ 2) ದಯಾನಿರೂಪಣಂ
3) ವಾತ್ಸಲ್ಯ ನಿರೂಪಣಂ 4) ಅಂತರ್ವ್ಯಾಪ್ತಿ ಬಹಿರ್ವ್ಯಾಪ್ತಿ ವಿಚಾರಃ
5) ಲಕ್ಷ್ಮ್ಯಾಃ ವಿಭುತ್ವ ನಿರಾಸಃ 6) ಪ್ರಪತ್ತೇಸ್ಸರ್ವಾಧಿಕಾರತ್ವಂ
7) ಲಕ್ಷ್ಮ್ಯಾಃ ಉಪಾಯತ್ವ ನಿರಾಸ ಪೂರ್ವಕಂ ಪುರುಷಕಾರತ್ವಂ
8) ಪ್ರಪತ್ತೇರನುಪಾಯತ್ವಂ 9) ಪ್ರಪತ್ತೇಃಷಡಂಗವಿಧಿ ನಿಷೇಧಃ
10) ಪ್ರಪತ್ತೇಃ ಪುನಃಕರಣ ನಿಷೇಧಃ 11) ಭರತ ಪ್ರಪತ್ತಿ ನೈಷ್ಫಲ್ಯಂ
12) ಸರ್ವ ಧರ್ಮ ಪರಿತ್ಯಾಗಸ್ಯಪ್ರಪತ್ತ್ಯಂಗತಾ
13) ಸಪ್ರಣವಾಷ್ಟಾಕ್ಷರಸ್ಯ ಸರ್ವಾಧಿಕಾರತ್ವಂ
14) ಕರ್ಮಯೋಗಾದೀನಾಂ ಪ್ರತ್ಯೇಕಂ ಮೋಕ್ಷ ಸಾಧನತ್ವಂ
15) ಸಾಧ್ಯ ಧರ್ಮಾಣಾಂ ಸ್ವರೂಪ ವಿರುದ್ಧತ್ವಂ
16) ಕೈವಲ್ಯಸ್ಯಾಂಡಬಹಿರ್ಭೂತತ್ವಂ
17) ಕೈವಲ್ಯಸ್ಯ ನಿತ್ಯ ಮೋಕ್ಷತ್ವಂ
18) ಮುಕ್ತಾನಾಂ ಸೃಷ್ಟ್ಯಧಿಕಾರಃ
19) ಹೀನವರ್ಣ ಪ್ರಪನ್ನಸ್ಯ ಪೂಜ್ಯತ್ವಂ
20) ಮೋಕ್ಷೇತಾರತಮ್ಯ ವಿಚಾರಃ
21) ಕರ್ಮಣಾಂಕೈಂಕರ್ಯ ರೂಪತ್ವಂ
22) ಭಗವತಶ್ಚೇತನಪ್ರಾಪ್ತಿರೇವ ಫಲಂ
23) ತತ್ಕ್ರತುನ್ಯಾಯ ವಿಚಾರಃ

ಶ್ರೀ

ಶ್ರೀಮತೇ ರಾಮಾನುಜಾಯನಮಃ

ಶ್ರೀಮತೇ ರಮ್ಯಜಾಮಾತೃಮುನಯೇ ನಮಃ

# ಭೂಮಿಕೆ

ಈ ಅಪಾರ ಸಂಸಾರ ಸಾಗರದಲ್ಲಿ ಮುಳುಗಿರುವ ಸಮಸ್ತ ಚೇತನ ಸಮೂಹವೂ, ಕೂಡ ಈ ಕಡಲನ್ನು ಹಾಯ್ದುಹೋಗಲು ಯಾವೊಂದು ತೆಪ್ಪವನ್ನೂ ಕಾಣದೆ, ಕೊನೆಗೆ ಆತ್ತಕಡೆಯ ದಡವನ್ನು ಸೇರಬೇಕೆಂಬ ಇಚ್ಛೆಯೂ ಇಲ್ಲದೆ, ಕ್ಲೇಶಕರ್ಮಾದಿಗಳೆಂಬ ದೊಡ್ಡ ಅಲೆಗಳಿಂದ ಉಬ್ಬರ ವಾಂತ ಈ ಕಡಲಲ್ಲೇ ಅನವರತವೂ ಮುಳುಗೇಳುತ್ತಾ, ನೀರು ಕುಡಿಯುತ್ತಾ ಬಹಳ ದುಃಖಿತವಾಗಿದ್ದರೂ ಕೂಡ, ಆ ಸಂಸಾರ ದುಃಖವನ್ನೇ ಸುಖವನ್ನಾಗಿ ಭಾವಿಸುತ್ತಿದೆಯೆಂಬುದು ಕಣ್ಣೆದುರಿಗೆ ಕಾಣುತ್ತಿರುವ ವಿಷಯ.

ಈ ಕಡಲನ್ನು ದಾಟಬೇಕೆಂಬ ಇಚ್ಛೆಯು—ಯಾವಾಗಲೋ—ಎಲ್ಲಿಯೋ ಯಾವರೀತಿಯಲ್ಲೋ—ಯಾವನೋ—ಒಬ್ಬನಿಗೆ—ಯಾವುದೋ ಒಂದು ಜನ್ಮದಲ್ಲಿ ವಿಜ್ಞಾನಿಯಾದ ಸದಾಚಾರ್ಯನ ನಿರ್ವ್ಯಾಜವಾದ ದಯಾಪೂರ್ಣ ಕಟಾಕ್ಷದಿಂದುಂಟಾಗುವುದು.

ಯಾವಾಗ್ಗ ಇವನು ನಿರ್ವೇದ ಪಟ್ಟು ಈ ಕಡಲನ್ನು ಹೇಗಾದರೂ ದಾಟಿಯೇ ತೀರಬೇಕೆಂದು ತೊಳಲುವನೋ— ಆಗ ಶ್ರೋತ್ರಿಯನಾಗಿ ಬ್ರಹ್ಮನಿಷ್ಠನಾದ ಸಂಸಾರ ಸಾಗರವನ್ನು ದಾಟಿಸಲು ಶಕ್ತನಾದ ಮತ್ತು ಜ್ಞಾನಿಯಾದ ಸದಾಚಾರ್ಯನನ್ನು ಹುಡುಕಿ ಅವನ ಉಪಸತ್ತಿಮಾಡುವನು.

ಆ ಗುರುವೂ ಈ ಶಿಷ್ಯನ ಶಾಂತ್ಯಾದಿ ಗುಣಗಳನ್ನೂ, ಸಂಸಾರದಲ್ಲಿಯ ಜಿಹಾಸೆಯನ್ನೂ, ಆದರದಿಂದ ಸದರ್ಥವನ್ನು ಕೇಳಬೇಕೆಂಬ ತ್ವರೆಯನ್ನೂ ನೋಡಿ, ಈ ಕಡಲನ್ನು ಹಾಯಲು ಉಪಾಯವಾದ ಬ್ರಹ್ಮವಿದ್ಯೆಯನ್ನು (ಬ್ರಹ್ಮಜ್ಞಾನ) ಯಥಾವಸ್ಥಿತರೀತಿಯಿಂದ ಅವನಿಗೆ ಉಪದೇಶಿಸುವನು.

ಆ ತತ್ವದ ರೀತಿಯೇನುಗೊತ್ತೆ ? ಇದು ವೇದಗಳ ಸಕಲ ಶಾಖೆಗಳ ಘಾವತ್ತೂಉಪನಿಷತ್ತುಗಳಲ್ಲಿನಸಾರಸರ್ವಸ್ವವು. ಮಹರ್ಷಿವ್ಯಾಸರಿಂದಬ್ರಹ್ಮಸೂತ್ರದಲ್ಲಿ ಮಿಮಾಂಸಿತವಾಗಿ ತೀರ್ಮಾನಿಸಲ್ಪಟ್ಟಿರುವುದು. ಮಹರ್ಷಿ ಕುಲ

ಕಣ್ಮಣಿಗಳಾದ ವ್ಯಾಸವಾಲ್ಮೀಕಿ ಪರಾಶರಾದಿಗಳಿಂದ ಇತಿಹಾಸಸ್ಮೃತ್ಯಾದಿಗಳ ಮೂಲಕ ಉಪಬೃಂಹಣ ಮಾಡಲ್ಪಟ್ಟಿರುವುದು; ಸಮಸ್ತನಿತ್ಯಮುಕ್ತಾದಿಗಳೆಲ್ಲರೂ ಪ್ರತಿದಿನವೂ ಅನುಭವಿಸುತ್ತಾ ಸೇವೆಮಾಡುತ್ತಿರುವಂತಹುದು ಪರಮಯೋಗಿಗಳಾದ ಸನಕಸನಂದನಾದಿಗಳಿಗೂ ಸ್ವಪ್ನಸದೃಶವಾದ ಪ್ರತ್ಯಕ್ಷಸಮಾನಾಕಾರ ಜ್ಞಾನಕ್ಕೆ ಗೋಚರವಾಗತಕ್ಕುದು. ಭಗವಂತನ ನಿರ್ಹೇತುಕ ಕೃಪಾಕಟಾಕ್ಷದಿಂದ ಕೀಳು ಮೇಲು ತತ್ವಗಳನ್ನೆಲ್ಲಾ ಚೆನ್ನಾಗಿ ಅರಿತಿರುವ ನಮ್ಮಾಳ್ವಾರ್ ಮೊದಲಾದ ಆಳ್ವಾರುಗಳ ಸಾವಿರಾರು ದಿವ್ಯಪ್ರಬಂಧಗಳಿಂದ ಬೆಳೆಸಲ್ಪಟ್ಟಿರುವಂತಹುದು; ತಾನೇ ಸಿದ್ಧೋಪಾಯವಾಗಿಯೂ ಪ್ರಾಪ್ಯವಾಗಿಯೂಇದ್ದುಕೊಂಡು ಲೋಕವಿಲಕ್ಷಣ ವೆನಿಸಿಕೊಂಡಿರುವ ಮತ್ತು ಪರಬ್ರಹ್ಮನೆಂದು ಕರೆಯಲ್ಪಡುವದೀಗ ಆಪರತತ್ವ. ಇದೇ ಈಶ್ವರತತ್ವವೆಂಬುದು.(ಚೇತನ ಅಚೇತನಗಳೆಂಬ ಮತ್ತೆರಡುತತ್ವಗಳೂ ಆ ಪರಮಾತ್ಮನಿಗೆ ಶರೀರವಾಗಿರುವುದರಿಂದ ಅದಕ್ಕಿಂತಲೂ ಕೀಳಾದ ತತ್ವಗಳು.)

ಈ ಪರತತ್ವವು ಬೇರೆಬೇರೆ ಶಾಖೆಗಳಲ್ಲಿ ಸತ್, ಬ್ರಹ್ಮ, ಆತ್ಮ ಮೊದಲಾದ ಸಾಮಾನ್ಯ ಶಬ್ದಗಳಿಂದ ಹೇಳಲ್ಪಟ್ಟಿದೆ. ಆದರೆ ಸಾಮಾನ್ಯ ವಿಶೇಷ ನ್ಯಾಯವೆಂಬ ಮೀಮಾಂಸಾನ್ಯಾಯದಂತೆ "ಏಕೋಹವೈನಾರಾಯಣ ಆಸೀನ್ನಬ್ರಹ್ಮಾನೇಶಾನಃ" ಎಂಬ ಮಹೋಪನಿಷದ್ವಾಕ್ಯದ ಪ್ರಕಾರ ಆ ಸಾಮಾನ್ಯ ಶಬ್ದಗಳೆಲ್ಲವೂ ನಾರಾಯಣನೆಂಬ ದೇವತಾವಿಶೇಷವನ್ನೇ ಬೋಧಿಸುವುವು. ಎಂದು ತೀರ್ಮಾನಿಸಲ್ಪಟ್ಟಿರುವುದರಿಂದ ಆ ಪರತತ್ವವು ಶ್ರೀಮನ್ನಾರಾಯಣನೇ ಎಂಬುದು ನಿರ್ಣೀತವಾಗಿದೆ.

ಇಷ್ಟಾದಮೇಲೆ– ಶ್ರೀಮನ್ನಾರಾಯಣನೊಬ್ಬನೇ ಪರತತ್ವರವಸ್ತು, ಅವನು ಪುರುಷೋತ್ತಮ, ಸಮಸ್ತ ಚೇತನಾಚೇತನಾತ್ಮಕ ಜಗತ್ತನ್ನು ಶರೀರವಾಗುಳ್ಳವನು, ಇವನನ್ನೇ ಪರಬ್ರಹ್ಮ, ಪರತತ್ವ, ಪರಂಜ್ಯೋತಿ; ಪರಮಾತ್ಮ ಮುಂತಾದ ಶಬ್ದಗಳಿಂದ ನಾರಾಯಣಾನುವಾಕವು ಕೊಂಡಾಡಿರುವುದು; ತಾನೇ ಪರಮ ಪುರುಷಾರ್ಥ ಸ್ವರೂಪನಿವನು; ತನ್ನನ್ನು ಪಡೆಯಲು ತಾನೇಉಪಾಯವಾಗಿರುವವನು; ಇವನಲ್ಲಿ ಕೆಟ್ಟದೆಂಬುದರ ಸಂಬಂಧವೇ ಇಲ್ಲ. ಮಂಗಳಕ್ಕೆಲ್ಲಾ ಆವಾಸನಿವನು; ಚೇತನಾಚೇತನಗಳಿಗಿಂತಲೂ ವಿಲಕ್ಷಣನಾಗಿದ್ದು ಜ್ಞಾನಾನಂದೈಕ ಸ್ವರೂಪನಾಗಿರುವವನು, ಸರ್ವ

ಜಗತ್ಸೃಷ್ಟಿಸ್ಥಿತಿಲಯಕಾರಣನು, ಸರ್ವಜ್ಞತ್ವ, ಸರ್ವಶಕ್ತತ್ವ ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ ಮುಂತಾದ ಮೇರೆಮೀರಿದ ಅಸಂಖ್ಯಾತ ಮಂಗಳಕರ ದಿವ್ಯಾತ್ಮಗುಣಗಳಿಗೆ ಸ್ವಭಾವದಿಂದಲೇ ನೆಲೆವೀಡಾಗಿರುವವನು, ಇವನೇ ಸರ್ವೇಶ್ವರ; ಇವನಿಗಿಂತಲೂ ಮೇಲಾದ ಆಶ್ವರ್ಯವಸ್ತುವಿಲ್ಲ; ತನ್ನ ದಿವ್ಯಾತ್ಮ ಸ್ವರೂಪಕ್ಕೆ ತಕ್ಕ ದಿವ್ಯಮಂಗಳ ವಿಗ್ರಹ (ಶರೀರ) ವುಳ್ಳವನು, ಆ ದಿವ್ಯಮಂಗಳ ವಿಗ್ರಹಕ್ಕೆ ತಕ್ಕ ದಿವ್ಯಾಭರಣಗಳನ್ನುಧರಿಸಿರುವವನು, ತನ್ನ ಶಕ್ತಿಗೆ ತಕ್ಕ ಅಪರಿಮಿತಾಶ್ಚರ್ಯಕರವಾದ ನಾನಾವಿಧ ಶಂಖಚಕ್ರಾದಿ ದಿವ್ಯಾಯುಧಗಳನ್ನು ಧರಿಸಿರುವವನು, ತನಗಿಷ್ಟವಾದ ತನ್ನ ಸ್ವರೂಪ ವಿಗ್ರಹಗಳಿಗೆ ಅನುರೂಪವಾದ ಗುಣ ವಿಗ್ರಹಾದಿಗಳುಳ್ಳ ಮೇರೆಮೀರಿದ ಮಹಿಮೆಯುಳ್ಳ ಶ್ರೀ ಭೂನೀಳಾದಿ ದಿವ್ಯಮಹಿಷಿಗಳಿಂದ ಸೇವಿಸಲ್ಪಡತಕ್ಕವನು; ತನಗೆ ತಕ್ಕ ಜ್ಞಾನಕ್ರಿಯಾದಿಗಳುಳ್ಳ ಲೆಕ್ಕಿಸಲಾಗದ ಪರಿಜನ ಪರಿಚ್ಛದಗಳಿಂದ ಕೂಡಿರುವವನು; ತನಗೆ ತಕ್ಕ ನಾನಾವಿಧಾಶ್ಚರ್ಯಕರವಾಗಿರುವ ಅಪರಿಚ್ಛಿನ್ನವಾದ ಅವಾಙ್ಮನಸಗೋಚರವಾದ, ಭೋಗ್ಯವಸ್ತುಗಳು, ಭೋಗಸಾಮಗ್ರಿಗಳು, ಭೋಗಸ್ಥಾನಗಳಿಂದ ಇವನ ನಿರತಿಶಯ ವೈಭವವು ಎದ್ದುಕಾಣುವುದು. ಇಂತಹ ಶ್ರೀಮನ್ನಾರಾಯಣನೊಬ್ಬನೇ ಸದ್ವಿದ್ಯಾದಹರವಿದ್ಯಾದಿ ಸಕಲ ಬ್ರಹ್ಮವಿದ್ಯೆಗಳಲ್ಲೂ ಪ್ರತಿಪಾದಿತ ನಾಗಿರುವನು. ಈ ಅರ್ಥವನ್ನೇ ನೂರಾರು ಶ್ರುತಿಗಳೂ ವಿವರಿಸಿರುವುವು.

ಅದೆಂತೆನೆ– "ನಿಷ್ಕಳಂ" "ನಿರಂಜನಂ" "ನಿರ್ವಿಕಾರಂ" ನಿಷ್ಕಲಂ ನಿಷ್ಕ್ರಿಯಂಶಾಂತಂ" "ನಿರ್ಗುಣಂ" "ವಿಜ್ಞಾನಂ" "ಆನಂದಂ" "ಯಸ್ಸರ್ವಜ್ಞಸ್ಸರ್ವವಿತ್" ಯಸ್ಯಜ್ಞಾನಮಯಂತಪಃ" "ಪರಾಸ್ಯಶಕ್ತಿರ್ವಿವಿಧೈವಶ್ರೂಯತೇ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ" "ಅಪಹತಪಾಪ್ಮಾ ವಿಜರೋವಿಮೃತ್ಯುರ್ವಿಶೋಕೋವಿಜಿಘತ್ಸ ಸ್ಸತ್ಯಕಾಮಸ್ಸತ್ಯ ಸಂಕಲ್ಪಃ" "ನೇತಿ ನೇತಿ" ಸರ್ವಸ್ಯವಶೀ ಸರ್ವಸ್ಯೇಶಾನಃ" ಪತಿಂವಿಶ್ವಸ್ಯಾತ್ಮೇಶ್ವರಂ" 'ತಸ್ಯಭಾಸಾಸರ್ವಮಿದಂವಿಭಾತಿ' 'ತಮೀಶ್ವರಾಣಾಂ ಪರಮಂ ಮಹೇಶ್ವರಂ' "ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ" "ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ" "ಯಃಪೃಥಿವ್ಯಾಂತಿಷ್ಠನ್" "ಯಆತ್ಮನಿತಿಷ್ಠನ್" ಏಷತ ಆತ್ಮಾಂತರ್ಯಾಮ್ಯಮೃತಃ" ಪ್ರಧಾನಕ್ಷೇತ್ರಜ್ಞ ಪತಿರ್ಗುಣೇಶಃ" "ಪೃಥಗಾತ್ಮಾನಂ

ಪ್ರೇರಿತಾರಂಚಮತ್ವಾ" "ನಿತ್ಯೋನಿತ್ಯಾನಾಂ ಚೇತನಶ್ಚೇತನಾನಾ ಮೇಕೋಬಹೂನಾಂಯೋವಿದಧಾತಿಕಾಮಾ" "ಸದೇವ ಸೋಮ್ಯೇದ ಮಗ್ರಆಸೀದೇಕ ಮೇವಾದ್ವಿತೀಯಂ" "ತದೈಕ್ಷತ" "ನಾಮರೂಪೇ ವ್ಯಾಕರವಾಣಿ" ತದನುಪ್ರವಿಶ್ಯ, ಸಚ್ಚತ್ಯಚ್ಚಾಭವತ್" ಆಕಾಶೇ ಓತಶ ಪ್ರೋತಶ್ಚ" "ತಮಃ ಪರೇದೇವ ಏಕೀಭವತಿ" ತೇಜಃ ಪರಸ್ಯಾಂ ದೇವತಾಯಾಂ" ವೇದಾಹಮೇತಂ ಪುರುಷಂ ಮಹಾನ್ತಂ, ಆದಿತ್ಯವರ್ಣಂ ತಮಸಃ ಪರಸ್ತಾತ್" ಯಏಷೋಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ" ತಸ್ಯಯಥಾ ಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ" ಸರ್ವೇ ನಿಮೇಷಾಜಜ್ಞಿರೇ ವಿದ್ಯುತಃ ಪುರುಷಾದಧಿ" ನೀಲತೋಯದ ಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ" ಮನೋಮಯಃ ಪ್ರಾಣಶರೀರೋ ಭಾರೂಪ-ಸ್ಸತ್ಯಸಂಕಲ್ಪ ಆಕಾಶಾತ್ಮಾ ಸರ್ವಕಾಮಸ್ಸರ್ವ ಗಂಧಸ್ಸರ್ವರಸ ಸ್ಸರ್ವಮಿದ ಮಭ್ಯಾತ್ತೋsವಾಕ್ಯನಾದರಃ" "ಸೂಹಾರಜನಂವಾಸಃ" "ಅಸ್ಯೇಶಾನಾ ಜಗತೋವಿಷ್ಣುಪತ್ನೀ" "ಹ್ರೀಶ್ಚತೇ ಲಕ್ಷ್ಮೀಶ್ಚ ಪತ್ನ್ಯೌ" "ತದ್ವಿಷ್ಣೋಃ ಪರಮಂಪದಂ ಸದಾಪಶ್ಯಂತಿಸೂರಯಃ" ತದ್ವಿಪ್ರಾಸೋ ವಿಪನ್ಯವೋ ಜಾಗೃವಾಂಸಸ್ಸಮಿನ್ಧತೇ, ವಿಷ್ಣೋರ್ಯತ್ಪರಮಂ ಪದಂ" ಕ್ಷಯನ್ತಮ-ಸ್ಯ ರಜಸಃ ಪರಾಕೇ" ಯದೇಕಮವ್ಯಕ್ತ ಮನಂತರೂಪಂ ವಿಶ್ವಂ ಪುರಾಣಂತಮಸಃಪರಸ್ತಾತ್" ಯೋ ವೇದನಿಹಿತಂ ಗುಹಾಯಾಂ ಪರಮೇವ್ಯೋಮನ್" ಯೋಸ್ಯಾಧ್ಯಕ್ಷಃ ಪರಮೇವ್ಯೋಮನ್" ತದಕ್ಷರೇಪರಮೇ ವ್ಯೋಮನ್" "ನಾರಾಯಣಪರಂ ಬ್ರಹ್ಮ" "ಏಷಸೇತುರ್ವಿಧರಣಃ" "ಅಮೃತಸ್ಯೈಷಸೇತುಃ" ಯಮೇವೈಷವೃಣುತೇತೇನ ಲಭ್ಯಃ" "ಬ್ರಹ್ಮ ವಿದಾಪ್ನೋತಿಪರಂ" ಇತ್ಯಾದಿಗಳು. ಈ ಶ್ರುತಿಗಳನ್ನೇ 'ಇತಿಹಾಸ ಪುರಾಣಾದಿಗಳು ಉಪಬೃಂಹಣ ಮಾಡುವುವು. ಇತಿಹಾಸ ಶ್ರೇಷ್ಠವಾದ ಶ್ರೀರಾಮಾಯಣವೂ ಮತ್ತು ಮಹಾಭಾರತವೂ ಅವಕಾಶದೊಗಕಿದಂತೆಲ್ಲಾ ಚೆನ್ನಾಗಿಯೇ ಉಪಬೃಂಹಣಮಾಡಿರುವುವು.

"ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಂಹಯೇತ್ ।
ಬಿಭೇತ್ಯಲ್ಪಶ್ರುತಾದ್ವೇದೋ ಮಾಮಯಂ ಪ್ರತರಿಷ್ಯತಿ ॥"

ಎಂಬಂತೆ, ಪುರಾಣಗಳು ಉಪಬೃಂಹಣಗಳೆನಿಸಿಕೊಂಡರೂ, ಸಾತ್ವಿಕ ಪುರಾಣಗಳು ಮಾತ್ರ ಸರಿಯಾದ ಉಪಬೃಂಹಣಗಳೆಂದು ಶಾಸ್ತ್ರಸಮ್ಮತ

ವಾಗಿದೆ. ಇದನ್ನೇ ಮಾತ್ಸ್ಯ ಪುರಾಣದಲ್ಲಿ ಹೇಳಿದೆ.-"ಸಂಕೀರ್ಣಾ ಸ್ಸಾತ್ತ್ವಿಕಾಶ್ಚೈವ ರಾಜಸಾಸ್ತಾಮಸಾಸ್ತಥಾ" ಎಂದು ಚತುರ್ಮುಖನ ಹಗಲುಗಳನ್ನು (ಕಲ್ಪ) ಸಾತ್ತ್ವಿಕ, ರಾಜಸ, ತಾಮಸ, ಸಂಕೀರ್ಣ, ಗಳೆಂದು ನಾಲ್ಕು ವಿಭಾಗಮಾಡಿ,

"ಯಸ್ಮಿನ್ ಕಲ್ಪೇತು ಯತ್ಪ್ರೋಕ್ತಂ ಪುರಾಣಂ ಬ್ರಹ್ಮಣಾಪುರಾ।
ತಸ್ಯ ತಸ್ಯತು ಮಾಹಾತ್ಮ್ಯಂ ತತ್ಸ್ವರೂಪೇಣ ಕಥ್ಯತೇ (ವರ್ಣ್ಯತೇ)

ಎಂಬು ಚತುರ್ಮುಖನು ಯಾವ ಗುಣ ತಲೆಯೆತ್ತಿರುವ ಹಗಲಲ್ಲಿ ಯಾವ ಪುರಾಣವನ್ನುಪದೇಶಿಸುವನೋ, ಆಯಾಪುರಾಣಗಳಲ್ಲಿ ಆಯಾದೇವತೆಗಳ ಮಾಹಾತ್ಮ್ಯವು ಹೇಳಲ್ಪಡುತ್ತದೆಂದು ತಿಳಿಸಿ, ವಿಶೇಷಾಕಾರದಿಂದಲೂ ಹೇಳಿದೆ.

ಅಗ್ನೇಶ್ಶಿವಸ್ಯ ಮಾಹಾತ್ಮ್ಯಂ ತಾಮಸೇಷು ಪ್ರಕೀರ್ತ್ಯತೇ ॥
ರಾಜಸೇಷು ಚ ಮಾಹಾತ್ಮ್ಯ ಮಧಿಕಂ ಬ್ರಹ್ಮಣೋವಿದುಃ ॥
ಸಾತ್ತ್ವಿಕೇಷ್ವಥ ಕಲ್ಪೇಷು ಮಾಹಾತ್ಮ್ಯ ಮಧಿಕಂ ಹರೇಃ।
ತೇಷ್ವೇವ ಯೋಗ ಸಂಸಿದ್ಧಾ ಗಮಿಷ್ಯಂತಿ ಪರಾಂಗತಿಂ॥
ಸಂಕೀರ್ಣೇಷು ಸರಸ್ವತ್ಯಾಃ ಪಿತೃಣಾಂ...... ॥ ಎಂದು

ತಾಮಸಕಲ್ಪಗಳಲ್ಲಿ ಅಗ್ನಿ, ಶಿವ; ಇವರ ಮಾಹಾತ್ಮ್ಯ ಅಧಿಕವಾಗಿದೆ. ರಾಜಸ ಕಲ್ಪದಲ್ಲಿ ಚತುರ್ಮುಖನ ಮಹಿಮೆ ಹೆಚ್ಚು, ಸಾತ್ವಿಕಕಲ್ಪಗಳಲ್ಲಿವಿಷ್ಣುವಿನ ಮಾಹಾತ್ಮ್ಯ ಹೆಚ್ಚು; ಯೋಗಸಿದ್ಧರೆಲ್ಲರೂ ಈಸಾತ್ತ್ವಿಕಪುರಾಣಗಳಿಂದಲೇ ತತ್ತ್ವಗಳನ್ನರಿತು ಪರಗತಿಯನ್ನು ಪಡೆಯುವರು. ಸಂಕೀರ್ಣಕಲ್ಪಗಳಲ್ಲಿಸರಸ್ವತಿ ಪಿತೃದೇವತೆಗಳು ಇತ್ಯಾದಿಗಳ ಮಾಹಾತ್ಮ್ಯ ಹೆಚ್ಚಾಗಿದೆ ಎಂದು ಹೇಳಿದೆ.

ಆದಕಾರಣ ಸಾತ್ತ್ವಿಕ ಪುರಾಣಗಳಲ್ಲಿ ಮೊದಲನೇ ಸ್ಥಾನಗಳಿಸಿರುವ ಈ ವಿಷ್ಣು ಪುರಾಣವನ್ನು ಸಮಸ್ತ ದಿಗ್ದೇಶದ ಶಿಷ್ಟರೆಲ್ಲರೂ ಕೂಡ ಸರ್ವ ಧರ್ಮಗಳ ಮತ್ತು ಸರ್ವತತ್ತ್ವಗಳ ತೀರ್ಮಾನವನ್ನು ಪಡೆಯಲು ಪೂರ್ಣವಾದ ಪ್ರಧಾನ ಪ್ರಮಾಣವೆಂದು ಅಂಗೀಕರಿಸಿರುವರು. ಏಕೆಂದರೆ- ಇಲ್ಲಿಯ ನಿರೂಪಣ ಕ್ರಮವೇ ಅನ್ಯಾದೃಶವಾದುದು. "ಯನ್ಮಯಂಚ ಜಗತ್" ಎಂದು ಸಾಮಾನ್ಯ ಪ್ರಶ್ನೆಗೆ 'ವಿಷ್ಣೋಸ್ಸಕಾಶಾತ್' ಎಂದು ವೈಯಕ್ತಿಕವಾಗಿ ಉತ್ತರಿಸಿದೆ.

ಪುರಾಣಾಂತರಗಳಲ್ಲಿ ಈ ರೀತಿ ಪ್ರಶ್ನೋತ್ತರಗಳಿಲ್ಲ. ಪದ್ಮ ಪುರಾಣದಲ್ಲಿ 'ಪುನಃ ಪುರಾಣಮಾಚಕ್ಷ್ವ ಹರಿವಾರ್ತಾಸಮನ್ವಿತಂ' ಹರಿಯ ಮಹಿಮೆಯನ್ನು ಹೇಳುವ ಪುರಾಣವನ್ನು ಮತ್ತೂ ಹೇಳು' ಎಂದು ಪ್ರಶ್ನಿಸುವನು. 'ತಂಪ್ರಣಮ್ಯ ಪ್ರವಕ್ಷ್ಯಾಮಿ ಪುರಾಣಂ ಪದ್ಮ ಸಂಜ್ಞಿಕಂ' 'ಹರಿಯನ್ನು ನಮಸ್ಕರಿಸಿ ಪದ್ಮಪುರಾಣವನ್ನು ಹೇಳುವೆನು' ಎಂದುತ್ತರಿಸಿರುವನು. ಮಾತ್ಸ್ಯ ಪುರಾಣದಲ್ಲಿ—"ಕಥಂಸಸರ್ಜಭಗವಾ‌ನ್ ಲೋಕನಾಥಶ್ಚರಾಚರಂ |

ಕಸ್ಮಾಚ್ಚಭಗವಾನ್ ವಿಷ್ಣುಃ ಮತ್ಸ್ಯರೂಪತ್ವ ಮಾಸ್ಥಿತಃ||

ಭಗವಂತನು ಈ ಲೋಕಗಳನ್ನು ಹೇಗೆ ಸೃಷ್ಟಿಸಿದ ? ಏಕೆ ಮತ್ಸ್ಯಾವತಾರ ತಾಳಿದ ? ಎಂದು ಪ್ರಶ್ನಿಸಿರುವನು.

'ಪುಣ್ಯಂ ಪವಿತ್ರಮಾಯುಷ್ಯ ಮಿದಾನೀಂ ಶೃಣುತ ದ್ವಿಜಾಃ |
ಮಾತ್ಸ್ಯಂ ಪುರಾಣಮಖಿಲಂ ಯಜ್ಜಗಾದ ಗದಾಧರಃ ||'

ಪವಿತ್ರವಾದ ಮಾತ್ಸ್ಯಪುರಾಣವನ್ನು ಹೇಳುವೆನು ಕೇಳಿರೆಂದುತ್ತರಿಸಿರುವನು. ಶಿವಪುರಾಣದಲ್ಲಿ—

"ಕಥಯತ್ವಂ ಪ್ರಸಾದೇನ ಶಿವರೂಪಮನುತ್ತಮಂ" ಶಿವನ ಮಹಿಮೆಯನ್ನು ಹೇಳೆಂದು ಪ್ರಶ್ನಿಸಿರುವನು; 'ಸಮ್ಯಕ್ಪೃಷ್ಟಂ ಭವದ್ಭಿಸ್ತು ಯಥಾವತ್ಕಥಯಾಮ್ಯಹಂ' ಚೆನ್ನಾಗಿಕೇಳಿದಿರಿ. ಹಾಗೆಯೇ ಶಿವನ ಮಹಿಮೆಯನ್ನು ಹೇಳುವೆನು ಎಂದುತ್ತರಿಸಿರುವನು.

ಈ ವಿಷ್ಣು ಪುರಾಣದಲ್ಲಿ ಯಾವೊಂದು ದೇವತೆಯಲ್ಲೂ ಪಕ್ಷಪಾತವಿಲ್ಲ. ಯಾವೊಂದು ದೇವತೆಯ ಮಹಿಮೆಯನ್ನೂ ವೈಯುಕ್ತಿಕವಾಗಿ ಕೇಳಬೇಕೆಂಬ ಪ್ರಶ್ನೆಯೂಇಲ್ಲ. ಮತ್ತೇನೆಂದರೆ "ಈ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದ ವಸ್ತುಯಾವುದು ?" ಇದೀಗ ಸಾಮಾನ್ಯ ಪ್ರಶ್ನೆ. ಹೇಗೆಂದರೆ — ಪುರಾಣಾರಂಭದಲ್ಲಿ—

'ಸೋऽಹಮಿಚ್ಛಾಮಿ ಧರ್ಮಜ್ಞ ಶ್ರೋತುಂ ತ್ವತ್ತೋಯಥಾ ಜಗತ್ |
ಬಭೂವ ಭೂಯಶ್ಚ ಯಥಾ ಮಹಾಭಾಗ ಭವಿಷ್ಯತಿ ||
ಯನ್ಮಯಂಚ ಜಗದ್ಬ್ರಹ್ಮನ್ ಯತಶ್ಚೈತಚ್ಚರಾಚರಂ ।
ಲೀನಮಾಸೀದ್ಯಥಾ ಯತ್ರ ಲಯಮೇಷ್ಯತಿ ಯತ್ರಚ ||"

ಮೈತ್ರೇಯರು ಪರಾಶರ ಮಹರ್ಷಿಯನ್ನು ಪ್ರಶ್ನಿಸುವರು. 'ಎಲೈ ಧರ್ಮಜ್ಞರೇ ! ಈ ಪ್ರಪಂಚವು ಯಾವ ರೀತಿಯುಂಟಾಯಿತು ? ಪುನಶ್ಚ ಯಾವ ರೀತಿಯಾಗುವುದು ? ಈ ಪ್ರಪಂಚವು ಯಾವ ವಸ್ತುವಿನಿಂದ ತುಂಬಿರುವುದು ? ಈ ಚರಾಚರಾತ್ಮಕವಾದ ಜಗತ್ತು ಯಾವ ವಸ್ತುವಿನಿಂದ ಸೃಷ್ಟಿಸಲ್ಪಟ್ಟಿರುತ್ತೆ. ಯಾವ ವಸ್ತುವಿನಲ್ಲಿ ಸೃಷ್ಟಿಗೆ ಮೊದಲು ಅಡಗಿತ್ತು ? ಮುಂದಕ್ಕೆ ಎಲ್ಲಿ ಲಯವಾಗುವುದು ?' ಎಂದು ಸಾಮಾನ್ಯ ಪ್ರಶ್ನೆಯನ್ನು ಕೇಳಿರುವರು. ಅದಕ್ಕೆ ಪರಾಶರರು–

'ವಿಷ್ಣೋಃಸ್ಸಕಾಶಾದುದ್ಭೂತಂ ಜಗತ್ತತ್ರೈವ ಚಸ್ಥಿತಂ ||
ಸ್ಥಿತಿಸ್ಸಂಯಮಕರ್ತಾಸೌ ಜಗತೋಽಸ್ಯ ಜಗಚ್ಚಸಃ ||'

'ವಿಷ್ಣುವೆಂಬ ದೇವತಾ ವಿಶೇಷದಿಂದುಂಟಾಯಿತು ಈ ಜಗತ್ತು; ಅವನಲ್ಲೇ ಇದು ನಿಂತಿರುವುದು. ಈ ಜಗತ್ತನ್ನು ನಿಯಮಿಸುವವನೂ ಅವನೇ. ಈ ರೀತಿ ಅಂತರ್ಯಾಮಿಯಾಗಿದ್ದುಕೊಂಡು ನಿಯಮಿಸುವುದರಿಂದಲೇ ಈ ಜಗತ್ತೆಲ್ಲಾ ಅವನೇ ಎನ್ನುವರು' ಎಂದು 'ವಿಷ್ಣುವೆಂಬ ದೇವತಾ ವಿಶೇಷವೇ ಜಗತ್ತಿನ ಸೃಷ್ಟಿಸ್ಥಿತಿಲಯಗಳಿಗೆ ಕಾರಣವಾದುದರಿಂದ ಅದೇ ಪರಾತ್ಪರವಸ್ತು' ವೆಂದೂ ಉತ್ತರಿಸಿರುವರು. ಗ್ರಂಥದ ಕೊನೆಯಲ್ಲೂ ಸಹ ಚರಾಚರಾತ್ಮಕವಾದ ಈ ಜಗತ್ತು ಪರಮಾತ್ಮನಲ್ಲಿ ಲಯವಾಗುವುದೆಂದೂ ಅವನೇ ಸರ್ವಾಧಾರನು, ಸರ್ವಾಂತರಾತ್ಮನು ಸರ್ವೇಶ್ವರನು ಇತ್ಯಾದಿಗಳನ್ನು ನಿರೂಪಿಸಿ, ಪರಮಾತ್ಮನೇ ವಿಷ್ಣುವೆಂಬ ಹೆಸರಿಂದಲೇ ವೇದ ವೇದಾನ್ತಗಳಲ್ಲಿ ಕೊಂಡಾಡಲ್ಪಟ್ಟಿರುವನೆಂದೂ ಹೇಳಿದೆ.

"ಪ್ರಕೃತಿರ್ಯಾ ಮ್ಯಯಾಖ್ಯಾತಾ ವ್ಯಕ್ತಾವ್ಯಕ್ತ ಸ್ವರೂಪಿಣೀ |
ಪುರುಷ ಶ್ಚಾಪ್ಯುಭಾವೇತಾೌಲೀಯೇತೇ ಪರಮಾತ್ಮನಿ ||
ಪರಮಾತ್ಮಾಚ ಸರ್ವೇಷಾಮಾಧಾರಃ ಪರಮೇಶ್ವರಃ |
ವಿಷ್ಣುನಾಮಾ ಸವೇದೇಷು ವೇದಾನ್ತೇಷು ಚ ಗೀಯತೇ" ಎಂದು.

ಆದಕಾರಣ ಈ ವಿಷ್ಣುಪುರಾಣವೇ ಹಿಂದೆ ಹೇಳಲ್ಪಟ್ಟ ಶ್ರುತಿಗಳಿಗೆಲ್ಲಾ ಯಥಾವಸ್ಥಿತವಾದ ಉಪಬೃಂಹಣವೆನಿಸಿಕೊಳ್ಳುವುದು.

ಸಾತ್ತ್ವಿಕಪುರಾಣವೆಂಬ ಮೇಲ್ಮೆಯಿಂದಲೂ, ಪರಬ್ರಹ್ಮಸ್ವರೂಪಾದಿಗಳನ್ನು ನಿರೂಪಿಸುವ ಮೇಲ್ಮೆಯಿಂದಲೂ, ಈ ಪುರಾಣವು ಹೇಗೆ ಅಗ್ರ

ಸ್ಥಾನ ಪಡೆದಿರುವುದೋ, ಹಾಗೆಯೇ ಈ ಪುರಾಣವನ್ನು ಬರೆದವರ ಮಹಿಮೆಯಿಂದಲೂ ಇದರ ಮಹತ್ತ್ವ ಮತ್ತೂ ಹೆಚ್ಚಿರುವುದು. ಪುಲಸ್ತ್ಯವಸಿಷ್ಠ ಮಹರ್ಷಿಗಳಿಬ್ಬರ ವರಪ್ರಸಾದದಿಂದ ಚಿದಚಿದೀಶ್ವರ ತತ್ತ್ವಗಳ ಸ್ವರೂಪ ಸ್ವಭಾವಗಳು, ಭೋಗ ಮೋಕ್ಷಗಳು, ಅದಕ್ಕೆ ತಕ್ಕ ಉಪಾಯ-ಫಲಾದಿಗಳನ್ನೆಲ್ಲಾ ಯಥಾವಸ್ಥಿತರೀತಿಯಲ್ಲಿ ಕಂಡುಕೊಂಡ ಪರಾಶರಮಹರ್ಷಿಗಳೀಗ ಈ ವಿಷ್ಣು ಪುರಾಣವನ್ನು ರಚಿಸಿದವರು. ಅದನ್ನೇ ಪೀಠಿಕಾ ಪ್ರಕರಣದಲ್ಲಿ ನಿರೂಪಿಸಿರುವರು.

"ತ್ವಯಾತಸ್ಮಾತ್ಸಮಸ್ತಾನಿ ಭವಾನ್ ಶಾಸ್ತ್ರಾಣಿವೇತ್ಸ್ಯತಿ ।
ಸಂತತೇರ್ನ ಮಮ ಚ್ಛೇದಃ ಕ್ರುದ್ಧೇನಾಪಿ ಯತಃ ಕೃತಃ.
ತ್ವಯಾ ತಸ್ಮಾನ್ಮಹಾಭಾಗ ದದಾಮ್ಯನ್ಯಮಹಂವರಂ
ಪುರಾಣಸಂಹಿತಾಕರ್ತಾ ಭವಾನ್ ವತ್ಸ ಭವಿಷ್ಯತಿ ॥
ದೇವತಾಪಾರಮಾರ್ಥ್ಯಂಚ ಯಥಾವದ್ವೇತ್ಸ್ಯತೇ ಭವಾನ್ ।
ಪ್ರವೃತ್ತೇಚ ನಿವೃತ್ತೇಚ ಕರ್ಮಣ್ಯಸ್ತಮಲಾ ಮತಿಃ ॥
ಮತ್ಪ್ರಸಾದಾದಸಂದಿಗ್ಧಾ ತವವತ್ಸ ! ಭವಿಷ್ಯತಿ ॥" ಎಂದೂ,
"ತತಶ್ಚ ಪ್ರಾಹಭಗವಾನ್ ವಸಿಷ್ಠೋಽಸ್ಮತ್ಪಿತಾಮಹಃ ॥
ಪುಲಸ್ತ್ಯೇನಯದುಕ್ತಂತೇ ಸರ್ವಮೇತದ್ಭವಿಷ್ಯತಿ ॥" ಎಂದೂ
ನಿರೂಪಿಸಿರುವರು.

ಇಲ್ಲಿ 'ಪಾರಮಾರ್ಥ್ಯ-ಯಥಾವತ್' ಎಂಬೀ ಪದಗಳಿಂದ ಪರಾಶರರಿಗೆ ಧರ್ಮಾಧರ್ಮಗಳೆರಡರವಿಷಯದಲ್ಲೂ ಯಥಾವಸ್ಥಿತಜ್ಞಾನವಿರುವುದೆಂದು ಚೆನ್ನಾಗಿತಿಳಿದುಬರುತ್ತದೆ. ಆದಕಾರಣ-ಎಲ್ಲಾ ಪುರಾಣಗಳಮಧ್ಯೆ ಸಾತ್ತ್ವಿಕತಮವಾಗಿಯೂ, ಸರ್ವಶಿಷ್ಟ ಪರಿಗೃಹೀತವಾಗಿಯೂ ಇರುವ ಈ ಪುರಾಣ ರತ್ನವು ಪ್ರಧಾನತಮವಾದ ಪ್ರಮಾಣರತ್ನವೆನಿಸಿಕೊಂಡಿರುವುದು.

ಈ ಪುರಾಣದಲ್ಲಿ ಭಗವನ್ಮಹಿಮೆಯನ್ನು ವರ್ಣಿಸುತ್ತಾಬಂದು ಪ್ರಕರಣ ವಶಾತ್ ಭಗವದ್ಭಕ್ತರ ಮಹಿಮೆಯನ್ನು ತಿಳಿಸುವರು. ಅದಂತೆನೆ-ಮೈತ್ರೇಯರು ತಮ್ಮ ಗುರುಗಳಾದ ಪರಾಶರರನ್ನು ಪ್ರಶ್ನಿಸುತ್ತಾರೆ. ಈ ಬ್ರಹ್ಮಾಂಡದೊಳಗಿನ ಸಮಸ್ತಪ್ರಾಣಿಗಳೂ ಕರ್ಮಬಂಧದಿಂದ ತೊಳಲುತ್ತಿರುವುವು. ಆಯಾಯ ಕರ್ಮಾನುಗುಣವಾಗಿ ಯಾತನೆಗಳನ್ನನುಭವಿಸಲು ನರಕ

ಲೋಕಕ್ಕೆ ತೆರಳಿ ಯಮುನಿಗೆ ಅಧೀನವಾಗುವುವು. 'ಈರೀತಿ ಯಮುನಿಗೆ ವಶವಾಗದಿರಲು ಉಪಾಯವೇನು ? ' ಎಂದು

ಪರಂಪರೆಯಾಗಿ ಬಂದವಿಷಯವನ್ನೇ ಪರಾಶರರು ತಿಳಿಸುವರು. 'ಯಮ ಧರ್ಮರಾಯನು ತನ್ನ ಕೆಲಸಕ್ಕಾಗಿ ತ್ವರೆಯಿಂದ ಹೊರಟಿದ್ದ ತನ್ನ ಭಟನನ್ನು ಕರೆದು ಅವನಕಿವಿಯಲ್ಲಿ ಗುಟ್ಟಾಗಿ ಈರೀತಿ ಹೇಳಿದನು. ಮಧುಸೂಧನ ಪ್ರಪನ್ನರಲ್ಲಿ ನಿನಗೂ ನನಗೂ ಸಹಅಧಿಕಾರವಿರುವುದಿಲ್ಲ. ಅದರಿಂದ ನೀನು ಅವರ ಹತ್ತಿರ ಸುಳಿಯಬೇಡ? ಎಂದು. ಭಟನು ಆದನ್ನು ತಿಳಿಯಲು ಪ್ರಶ್ನಿಸುವನು ಭಗವತ್ಪ್ರಪನ್ನರುಯಾರು ? ಪ್ರಪತ್ತಿಯೆಂದರೇನು ? ವೈಷ್ಣವರುಯಾರು ? ಅವರಗುರುತುಗಳೇನು? ಎಂದು. ಯಮನುವಿವರಿಸುವನು 'ಜ್ಞಾನೀತ್ವಾತ್ಮೈವ ಮೇಮತಂ ಪ್ರಿಯೋಹಿಜ್ಞಾನಿನೋಽತ್ಯರ್ಥಮಹಂಸಚಮಮಪ್ರಿಯಃ ಎಂಬಂತೆ ಆಕಿಂಚನ್ಯಾನನ್ಯಗತಿತ್ವಗಳನ್ನುಮುಂದಿಟ್ಟು ಭಗವಂತನೇ ಉಪಾಯೋಪೇಯಗಳೆಂಬ ನಿಷ್ಕೃಷ್ಟಜ್ಞಾನದಿಂದ ಅವನನ್ನೇನಂಬಿ ಅವನಲ್ಲೇ ತಮ್ಮಸಮಸ್ತಭಾರಗಳನ್ನು ಇಟ್ಟಿರುವವರೀಗ ಜ್ಞಾನಿಗಳು, ಪ್ರಪನ್ನರು, ವೈಷ್ಣವರು. ವೈಷ್ಣವರೆಂದರೆ ವಿಷ್ಣುಭಕ್ತರೆಂದರ್ಥ. 'ನಿನಗಿಂತಲೂಬೇರೆ ಉಪಾಯವಿಲ್ಲ ನಿನಗಿಂತ ಲೂಬೇರೆ ಪ್ರಾಪ್ಯವಸ್ತುವೂಇಲ್ಲ' ವೆಂಬ ಆಕಿಂಚನ್ಯಾನನ್ಯಗತಿತ್ವಗಳಿಂದಕೂಡಿ 'ನೀನೇನನಗೆ ಉಪಾಯವಾಗಿರು " ಎಂದು ಅವನನ್ನೇ ಶರಣವನ್ನಾಗಿ ವರಿಸುವುದೀಗ ಪ್ರಪತ್ತಿ. ಈರೀತಿ ಪ್ರಪನ್ನನಾದವನು ದ್ವಯವೆಂಬ ಮಂತ್ರರತ್ನವನ್ನು ಸರ್ವದಾಅನುಸಂಧಾನ ಮಾಡುತ್ತಿರಬೇಕು. ಎಲ್ಲದರಲ್ಲೂ ಪರಮಾತ್ಮನು ಅಂತರ್ಯಾಮಿಯಾಗಿದ್ದು ಎಲ್ಲವೂ ಅವನ ಶರೀರವಾದುದರಿಂದ ಎಲ್ಲವಸ್ತುಗಳೂ ಭಗವಂತನಿಗೆ ಶರೀರವೆಂಬ ಸಮಬುದ್ಧಿಯು ಅವನಿಗಿರುವುದಲ್ಲದೆ, ಎಲ್ಲಾ ಆತ್ಮಗುಣಗಳೂ ಇವನಲ್ಲಿ ತುಂಬಿವೆ. 'ರೂಪಮೇವಾಸ್ಯೈತನ್ಮಹಿಮಾನಂ ವ್ಯಾಚಷ್ಟೇ' ಎಂಬಂತೆ ಆತ್ಮಗುಣಗಳೆಲ್ಲವೂ ಅವನಮುಖದಲ್ಲೇ ಎದ್ದು ಕಾಣುವುವು. ಅಂತಹವರನ್ನು ಬಿಟ್ಟುದೂರ ಸರಿದುಹೋಗು" ಎಂದು. ಮತ್ತು ಭಗವದ್ಭಕ್ತರಲ್ಲದವರ ಲಕ್ಷಣವನ್ನು ನಿರೂಪಿಸಿ ಅವರಮೇಲೀಗ ನನ್ನಅಧಿಕಾರ ವೆಂದೂ ತಿಳಿಸುವನು. ಆದಕಾರಣ ಭಗವಂತನಲ್ಲಿ ತಮ್ಮಭಾರವನ್ನೆಲ್ಲಾ ಇಟ್ಟುಪ್ರಪನ್ನರಾದವರಿಗೆ ಯಮ ಮತ್ತುಅವನಭಟರ ಭಯವುಲೇಶಮಾತ್ರವೂ ಇಲ್ಲವೇಇಲ್ಲ" ಎಂದು.

ಈ " ಯಮಕಿಂಕರ ಸಂವಾದ" ವೆಂಬ ಭಾಗವು ವಿಷ್ಣು ಪುರಾಣದ ಮೂರನೇ ಅಂಶದಲ್ಲಿ ಏಳನೇ ಅಧ್ಯಾಯವಾಗಿದೆ. ಶ್ರೀವಿಷ್ಣುಚಿತ್ತರು,ಶ್ರೀಧರರು ಮೊದಲಾದವರು ಈ ಮಹಾಪುರಾಣಕ್ಕೆ ವ್ಯಾಖ್ಯೆಯನ್ನು ರಚಿಸಿರುವರಾದರೂ, ಈ ಚಿಕ್ಕಭಾಗಕ್ಕೆ ಪೂರ್ಣವಾಗಿ ವ್ಯಾಖ್ಯಾನಮಾಡಿಲ್ಲ. ಈನ್ಯೂನತೆಯನ್ನು ಪರಿಹರಿಸುತ್ತಾ ಶ್ರೀಮದಿತ್ಯಾದಿಗಳಾದ ಸಾಹಿತ್ಯರತ್ನಂ,ಶಾಸ್ತ್ರಕವಿರತ್ನಂ ಸಾಹಿತ್ಯಾಲಂಕಾರ ಸಾಂಖ್ಯಯೋಗವೇದಾನ್ತವಿದ್ವಾನ್ ಸಾಂಖ್ಯತೀರ್ಥಂ ಇತ್ಯಾದಿ ಬಿರುದಾಂಕಿತ ರಾದ, ಉಭಯವೇದಾನ್ತನಿಷ್ಣಾತರಾದ, ಸೂಕ್ಷ್ಮಶ್ರೀತವುವಾದ ಸಂಪ್ರದಾಯರಹಸ್ಯಾರ್ಥಗಳನ್ನರಿತು ಅದರಂತೆ ಅನುಷ್ಠಾತೃಗಳಾದ, ಶಾನ್ತಿಶಮಾದಿಗುಣ ವಿಭೂಷಿತರಾದ ನನಗೆ ಆಚಾರ್ಯರೂ ಪೂಜ್ಯತಂದೆಯುತೂ ಆದ ಶ್ರೀಬಾಲಧನ್ವಿ (ಇಳೈಯವಿಲ್ಲಿ) ಜಗ್ಗುವೆಂಕಟಾಚಾರ್ಯಸ್ವಾಮಿಗಳವರು ಅತಿಸಂಗ್ರಹವೂ ಅತಿವಿಸ್ತರವೂ ಇಲ್ಲದಂತೆ ಈ ಭಾಗಕ್ಕೆ ವ್ಯಾಖ್ಯಾನವನ್ನು ಸರಸವಾಗಿ ಸರಳ ವಾಗಿ ರಚಿಸಿರುವರು. ಮಂತ್ರರತ್ನವೆಂಬ ದ್ವಯಮಂತ್ರದಲ್ಲಿ ಪ್ರತಿಪಾದಿತವಾಗಿರುವ ಪ್ರಪನ್ನ, ಪ್ರಪತ್ತಿ, ಪ್ರಪತ್ತಿಗೆ ವಿಷಯನಾದ ಭಗವಂತ, ಇವರ ಸ್ವರೂಪಗಳನ್ನು ಚೆನ್ನಾಗಿ ತೋರಿಸಿ, ಪ್ರಪನ್ನನ ಮೇಲ್ಮಟ್ಟದ ನಡತೆಯನ್ನು ಇಲ್ಲಿ ಸೊಗಸಾಗಿ ತಿಳಿಸಿರುವುದು.

ಸಂಪ್ರದಾಯ ರಹಸ್ಯಾರ್ಥಗಳನ್ನು ತಿಳಿದಿರುವ ಸಹೃದಯರೆಲ್ಲರೂ ಈ ವ್ಯಾಖ್ಯಾನಗ್ರಂಥದ ರಸಾಸ್ವಾದ ಮಾಡಿ ಆನಂದಿಸುವುದರಲ್ಲಿ ಸಂದೇಹವಿಲ್ಲ. ಈ ಆನಂದವು ಎಲ್ಲರಿಗೂ ದೊರಕಲಿ ಎಂಬಉದ್ದೇಶ್ಯದಿಂದ ಆ ಸಂಸ್ಕೃತ ವ್ಯಾಖ್ಯಾನವನ್ನು ಕನ್ನಡ ಭಾಷೆಯಲ್ಲಿ ಅನುವಾದಮಾಡಿ ಪ್ರಕಟಿಸಿದ್ದೇನೆ. ಈ ಗ್ರಂಥಾಧ್ಯಯನದಿಂದ ಪ್ರಪನ್ನನ ಸ್ವರೂಪ, ಅನುಷ್ಠಾನಾದಿಗಳನ್ನು ಎಲ್ಲರೂ ತಿಳಿದು ಅದರಂತೆ ಆದಷ್ಟೂ ನಡೆದರೇ ಆದರೆ ಈ ಗ್ರಂಥ ಪ್ರಕಟನವು ಸಾರ್ಥಕವಾದೀತು. ಈ ಗ್ರಂಥವನ್ನು ಅಂದವಾಗಿ ಮುದ್ರಿಸಿ ಕೊಟ್ಟ, ಅಶ್ವಿನಿ ಪ್ರಿಂಟರ್ಸ್‌ರವಲ್ಲಿ ಕೃತಜ್ಞನಾಗಿದೇನೆ.

ಈ ದಾಸನಾದನನಗೆ ಶರೀರ ಜ್ಞಾನದಾತೃಗಳಾದ ಶ್ರೀ ಉವೇ ಆಚಾರ್ಯರೂ ಪೂಜ್ಯತಂದೆಯವರೂ ಆದ ಇಳೈಯವಿಲ್ಲಿ (ಬಾಲಧನ್ವಿ) ಜಗ್ಗುವೆಂಕಟಾಚಾರ್ಯ ಸ್ವಾಮಿಗಳವರ ಆರನೇ ತಿರುವಧ್ಯಯನೋತ್ಸವಸಂದರ್ಭದಲ್ಲಿ

ಪ್ರಕಾಶಪಡಿಸಿರುವ ಈ ಗ್ರಂಥವನ್ನು ಶ್ರೀಗಳವರು ಸ್ವಾರಾಜ್ಯ ಪದವಿಯಲ್ಲಿದ್ದರೂ ಅಲ್ಲಿರುವ ಸರ್ವಜ್ಞತ್ವದಿಂದ ವೀಕ್ಷಿಸಿ ಆನಂದಿಸಿ ಪುತ್ರನೂ ಶಿಷ್ಯನೂ ದಾಸನೂ ಆದನನ್ನ ವಿಷಯದಲ್ಲಿ ಇಹಪರಗಳೆರಡರಲ್ಲೂ ನಿರಂತರವಾಗಿ ಆಶೀರ್ವದಿಸಲೆಂದು ಪ್ರಾರ್ಥಿಸುತ್ತೇನೆ.

ಯಾದವಾದ್ರಿ — ಇತಿ ಭಾಗವತರ ದಾಸಾನುದಾಸ
7-9-66. — ಬಾಲಧನ್ವಿ (ಇಳ್ಳೈಯವಿಲ್ಲಿ) ಜಗ್ಗು ಸುದರ್ಶನಾಚಾರ್ಯ
ಶ್ರೀ ಉವೇ. ಸಾಹಿತ್ಯರತ್ನಂ — ವಿಶಿಷ್ಟಾದ್ವೈತ ವೇದಾನ್ತಮುಖ್ಯಾಧ್ಯಾಪಕ
ಬಾಲಧನ್ವಿ ಜಗ್ಗು ವೆಂಕಟಾಚಾರ್ಯಸ್ವಾಮಿ — ಮಹಾರಾಜ ಸಂಸ್ಕೃತಕಾಲೇಜ್
ಗಳವರ ಆರನೇ ತಿರುವಧ್ಯಯನೋತ್ಸವ — ಮೈಸೂರು.

ಶ್ರೀ ಪರಾಭವ ಸಂ॥ ನಿಜ ಶ್ರಾವಣ
ಕೃಷ್ಣ ಸಪ್ತಮಿ ಬುಧವಾರ
ರೋಹಿಣಿ ನಕ್ಷತ್ರ.

ಯದುಕ್ಷ್ಮಾಭೃನ್ನಾಥೇ ವಿನಿಹಿತಭರಂ ಲಕ್ಷ್ಮಣಮುನೇಃ
ಸದಾಶ್ರೀಸೂಕ್ತಾರ್ಥ ಸ್ಮರಣ ವಿಧುತ ಸ್ವಾಂತಕಲುಷಂ॥
ಪವಿತ್ರಾಕ್ಷಸ್ರಗ್ಭಿಃ ಪರಿಕಲಿತಕಂತಂ ನಿಜ ಗುರೋಃ
ಭಜೇಧ್ಯಾನಾಸಕ್ತಂ ಯದುಗಿರಿಗೃಹಂ ವೇಂಕಟಗುರುಂ॥

ಶ್ರೀಭೈರವಃ

ಶ್ರೀ

ಶ್ರೀ ಮತೇ ರಾಮಾನುಜಾಯನಮಃ ।

ಶ್ರೀ ಮತೇ ರಮ್ಯಜಾ ಮಾತೃ ಮುನಯೇ ನಮಃ ॥

## ಶ್ರೀ ಬಾಲಧನ್ವಿ ಜಗನ್ನಾ ವೆಂಕಟಾಚಾರ್ಯಸ್ವಾಮಿಗಳವರು ಅನುಗ್ರಹಿಸಿದ ಶ್ರೀ ವಿಷ್ಣು ಪುರಾಣದಲ್ಲಿಯ ಯಮಕಿಂಕರ ಸಂವಾದ ವ್ಯಾಖ್ಯಾನದ ಅನುವಾದ

ಮೈತ್ರೇಯರು ತಮ್ಮ ಗುರುಗಳಾದ ಪರಾಶರರನ್ನು ಪ್ರಶ್ನಿಸುವರು. "ಬ್ರಹ್ಮಾಂಡದೊಳಗಣ ಸಪ್ತದ್ವೀಪಾದಿಗಳನ್ನೂ ಅವುಗಳ ವಿಷಯವನ್ನೆಲ್ಲಾ ತಮ್ಮಿಂದ ಕೇಳಿ ತಿಳಿದಾಯಿತು. ಇಲ್ಲಿರುವ ಪ್ರಾಣಿಗಳೆಲ್ಲವೂ ಕರ್ಮಬಂಧದಿಂದ ತೊಳಲುತ್ತಿರುವುವು. ಆ ಕರ್ಮಕ್ಕೆ ತಕ್ಕಂತೆ ಪಾಪಫಲಗಳನ್ನನುಭವಿಸಲು ನರಕಲೋಕಸೇರಿ ಯಮನಿಗೆ ವಶವಾಗುವರು. ಈ ಪ್ರಾಣಿಗಳೆಲ್ಲವೂ ಯಾವ ರೀತಿ ನಡೆದುಕೊಂಡರೆ ಯಮನಿಗೆ ಅಧೀನವಾಗಲಾರವು? ತಿಳಿಸಬೇಕು" ಎಂದು. ಪರಾಶರರು 'ಯಮನಿಂದ ಭಟನಿಗೂ ಅವನಿಂದ ಕಲಿಂಗದೇಶದಬ್ರಾಹ್ಮಣನೊಬ್ಬನಿಗೂ ಅವನಿಂದ ಭೀಷ್ಮಾಚಾರ್ಯರಿಗೂ ಅವರಿಂದ ನಕುಲನಿಗೂ ಉಪದೇಶವಾದ ಈ ಪರಂಪರಾಗತವಾದ ಆ ವಿಷಯವನ್ನೇ ತಿಳಿಸುತ್ತೇನೆ ಕೇಳು' ಎಂದುತ್ತರಿಸುವರು.

ಮೂಲ॥ ಕಾಲಿಂಗಉವಾಚ :—

ಸ್ವಪುರುಷ ಮಭಿವೀಕ್ಷ್ಯ ಪಾಶಹಸ್ತಂ  
ವದತಿಯಮಃ ಕಿಲತಸ್ಯಕರ್ಣಮೂಲೇ ॥  
ಪರಿಹರ ಮಧುಸೂದನ ಪ್ರಪನ್ನಾನ್  
ಪ್ರಭುರಹಮನ್ಯ ನೃಣಾಂ ನ ವೈಷ್ಣವಾನಾಂ ॥೧॥

ಕಳಿಂಗ ದೇಶದಿಂದ ಬಂದ ಬ್ರಾಹ್ಮಣನು 'ಸ್ವಪುರುಷಂ' ಇತ್ಯಾದಿ ಮಾತನ್ನು ಹೇಳುವನು. ಯಮಃ — ಯಮಧರ್ಮರಾಜನು, ಪಾಶಹಸ್ತಂ — ಪಾಶಾಯುಧವನ್ನು ಹಿಡಿದು ತನ್ನ ಕೆಲಸಕ್ಕೆ ತ್ವರೆಯಿಂದ ಹೊರಟಿರುವ, ಸ್ವಪುರುಷಂ — ಭಗವಂತನ ಭಟರಲ್ಲ, ಭಾಗವತರ ಭಟರೂ ಅಲ್ಲ; ರಾಜಪುರುಷನೆಂಬಂತೆ — (ಯಮನಿಗೆ) ತನಗೇ ಅಸಾಧಾರಣನಾದ

ಭಟನನ್ನು; ಹೀಗೆ ಅರ್ಥಹೇಳಿದರೇನೇ ಮುಂದಿನ ಪ್ರಶ್ನೋತ್ತರಗಳೆಲ್ಲಾ ಸಂಗತವಾಗುವುವು. ಅಭಿವೀಕ್ಷ್ಯ – ಭಗವದ್ಭಕ್ತರೆಲ್ಲಾದರೂ ಇರುವರೋ! ಎಂಬಶಂಕೆಯಿಂದ ಸುತ್ತಲೂ ನೋಡಿ. ತಸ್ಯ – ಆ ಭಟನ, ಕರ್ಣಮೂಲೇ-ಕಿವಿಯಲ್ಲಿ (ಕಿವಿಯೊಳಗೆ) ವದತಿಕಿಲ—ಹೇಳುವನಲ್ಲವೆ ?

ಹೀಗೆ ಗುಟ್ಟಾಗಿ ಹೇಳಲು ಕಾರಣಗಳಿವು—ತನ್ನ ಅಧಿಕಾರವು ವ್ಯಾಪಕ ವಲ್ಲವೆಂದು ಎಲ್ಲರೂ ತಿಳಿಯುವಂತೆ ಹೇಳುವುದು ಸರಿಯಲ್ಲ ಒಂದು. ವಿಷ್ಣು ವೈಷ್ಣವರ ಚರಿತ್ರವನ್ನು ನರಕದಲ್ಲಿರುವವರು ಕೇಳಿದ ಮಾತ್ರಕ್ಕೇ ನರಕದಿಂದ ಉತ್ತೀರ್ಣರಾಗುವರು. ಆಗ ಅವರ ಶಿಕ್ಷೆಗೆ ಮಧ್ಯೆ ವಿಚ್ಛೇದವಾಗುವುದರಿಂದ ತನ್ನ ಅಧಿಕಾರಕ್ಕೆ ಲೋಪವೆಲ್ಲಿ ಬರುವುದೋ ಎಂಬುದು, ಮತ್ತೊಂದು. 'ರಾಜಪತ್ನಿ ಪತಿವ್ರತೆ' ಯೆಂಬ ಮಾತನ್ನೇ ಆದರೂ ಸಭೆಯಲ್ಲಾಡುವುದು ಹೇಗೆ ರಾಜಾಪರಾಧವೋ ಅದರಂತೆ-ಭಗವದ್ಭಾಗವತರ ಮಹಿಮೆಯನ್ನೇ ವರ್ಣಿಸಲಾದರೂ ತಾನು ಅವರ ಹೆಸರು ಹಿಡಿದು ಹೇಳುವುದು ಮಹಾಪರಾಧ ವಾದೀತೆಂಬ ಭಯ ಮಗದೊಂದು.

ಏನೆಂದು ಹೇಳಿದನೆಂದರೆ—ಮಧುಸೂದನ ಪ್ರಪನ್ನಾನ್ – ಮಧುಸೂದ-ನನನ್ನೇ ಆಶ್ರಯಿಸಿದವರನ್ನು 'ಮಧುಸೂದನ' ಪದದಿಂದ ಆಶ್ರಿತರವಿರೋಧಿಗ ಳನ್ನು ನೀಗಿಸುವವನೆಂದು ತಾತ್ಪರ್ಯ. ಪ್ರಪನ್ನಾನ್ – ಭಗವಂತನೇ ಉಪಾಯ ಮತ್ತು ಉಪೇಯಗಳೆಂಬ ದೃಢನಿಶ್ಚಯವುಳ್ಳವರನ್ನು ಪರಿಹರ – ದೂರ ತೊರೆದು ಹೋಗು, ಅವರ ಹತ್ತಿರ ಹೋಗಬೇಡವೆಂದು ಮಾತ್ರವಲ್ಲ, ಅವರ ಕಣ್ಣಿಗೂ ಬೀಳಬೇಡ ವೆಂದರ್ಥ. ಏಕೆಂದರೆ 'ಮನಸಿವಸತಿಯಸ್ಯ ಸೋಽವ್ಯ ಯಾತ್ಮಾಪುರುಷವರಸ್ಯ ನತಸ್ಯ ದೃಷ್ಟಿಪಾತೇ ತವಗತಿರಥವಾಮಮಾಸ್ತಿ' ಎಂದು ಮುಂದೆಹೇಳುತ್ತಾನೆ.

ಅದಕ್ಕೆ ಭಟನು "ಎಲೈ ಧರ್ಮರಾಜ! ಸಮವರ್ತಿನ್!" ಸರ್ವೇಚೈತೇ ವಶಂ ಯಾನ್ತಿಯಮಸ್ಯ ಭಗವನ್ಕಿಲ" ಎಂದು ಹೇಳಿರುವಂತೆ ನಿನ್ನ ಅಧೀನ ಈಜಗತ್ತು. ನೀನು ಎಲ್ಲವನ್ನೂ ನಿಯಮಿಸುವವನು 'ನೀನೇಕೆ ಆ ಭಗವದ್ಭಕ್ತ ರಿಗೆ ಹೆದರುವೆ? ಎಂದ 'ಯಮನು ನಾಚಿಕೆ ಮತ್ತು ಭಯದಿಂದ ಹೇಳುವನು' 'ಪ್ರಭುರಹಮನ್ಯನೃಣಾಂನ ವೈಷ್ಣವಾನಾಂ' ಅಹಂ – ನಾನು 'ಅನ್ಯನೃಣಾಂ —ಭಗವದ್ಭಕ್ತರಿಂದ ಬೇರೆಯವರಿಗೆ, ಕೇವಲ ಗ್ರಾಮ್ಯ ಸುಖಗಳಲ್ಲೇ ಸಕ್ತ

ರಾದವರಿಗೆ, (ಭಗವದ್ಭಕ್ತರಲ್ಲದವರಿಗೆ) ಪ್ರಭುಃ– ಯಜಮಾನನು; ನಿಯಾಮಕನು.

'ಒಗಟಿಯಾಗಿ ಹೇಳುವೆಯಲ್ಲಾ? ಎಂದ ಭಟ. ಯಮನು ಸ್ಪಷ್ಟವಾಗಿ ' ನವೈಷ್ಣವಾನಾಂ ' ಎಂದುತ್ತರಿಸಿದ ; ವೈಷ್ಣವಾನಾಂ– ವಿಷ್ಣುಭಕ್ತರಿಗೆ ಅಹಂ– ನಾನು, ನ ಪ್ರಭುಃ– ಒಡೆಯನಲ್ಲ, ಆದಕಾರಣ 'ಸರ್ವೇಚೈತೇ ವಶಂಯ್ಯಾಂತಿ' ಎಂಬ ವಚನದಲ್ಲಿರುವ "ಯಮ" ಶಬ್ದಕ್ಕೆ ಕೇವಲ ಕೆಲವರನ್ನು ನಿಯಮಿಸುವವನು, ಎಂದೂ, ' ಸರ್ವೇ ' ಎಂಬ ಶಬ್ದಕ್ಕೆ 'ಕೆಲವರುಮಾತ್ರ' ಎಂಬ ಅರ್ಥವೂ ಸಮಂಜಸವಾಗುವುದು ||೧||

ಹೀಗೆ ಹೇಳಿದ ವಿಷಯವನ್ನು ವಿವರಿಸುತ್ತಾ ತಾನು ಕೆಲವರಿಗೆ ಪ್ರಭುವೆಂದೂ, ಕೆಲವರಿಗೆ ಪರತಂತ್ರನೆಂದೂ ಹೇಳುವನು ||

ಅಹಮಮರಗಣಾರ್ಚಿತೇನ ಧಾತ್ರಾ
ಯಮ ಇತಿ ಲೋಕಹಿತಾಹಿತೇ ನಿಯುಕ್ತಃ ||
ಹರಿಗುರುವಶಗೋಽಸ್ಮಿ ನ ಸ್ವತಂತ್ರಃ
ಪ್ರಭವತಿ ಸಂಯಮನೇ ಮಮಾಪಿವಿಷ್ಣುಃ ||೨||

ಅಹಂ– ನಾನು, ಅಮರಗಣಾರ್ಚಿತೇನ– ಬ್ರಹ್ಮಾದಿ ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಟ್ಟ, ಧಾತ್ರಾ– ಸರ್ವಸ್ರಷ್ಟನಾದ ನಾರಾಯಣನಿಂದ ಮುಂದೆಯೂ,'ಹರಿಮಮರಗಣಾರ್ಚಿತಾಂಘ್ರಿಪದ್ಮಂ' ಎಂದು ಹೇಳುವುದರಿಂದ ಧಾತೃ ಶಬ್ದಕ್ಕೆ ಚತುರ್ಮುಖನೆಂದು ಅರ್ಥವಲ್ಲ || ಲೋಕಹಿತಾಹಿತೇ– ಈ ಕರ್ಮ ಭೂಮಿಯಲ್ಲಿರುವ ಜನಗಳ ಪಾಪಕ್ಕೆ ತಕ್ಕ ಫಲವನ್ನು ಕೊಟ್ಟು ಆ ಮೂಲಕ ಅವರ ಪಾಪ ರೂಪವಾದ ಅಹಿತಗಳನ್ನು ನೀಗಿಸುತ್ತಾ, ಮುಂದಕ್ಕೆ ಒಳ್ಳೆಯದ್ದಾರಿಯಲ್ಲಿ ನಡೆಯುವಂತೆ ಮಾಡಿ ಹಿತವನ್ನು ಮಾಡುತ್ತಾ ಯಮಃ ಇತಿ– ಈ ಕರ್ಮ ಭೂಮಿಯಲ್ಲಿರುವ ಜನರನ್ನು ನಿಯಮಿಸುವವನಾದ್ದರಿಂದ 'ಯಮ' ನೆಂಬ ಹೆಸರಿನಿಂದ, ನಿಯುಕ್ತೋಽಸ್ಮಿ– ನಿಯಮಿಸಲ್ಪಟ್ಟದ್ದೇನೆ. 'ನನ್ನದು ಸಾಂಕುಶ ಪ್ರಭುತ್ವ' ಆದುದರಿಂದಲೇ ' ಹರಿಗುರುವಶಗೋಽಸ್ಮಿ'– ಹರಿಗೂ, ಹರಿಭಕ್ತರಾದ ಗುರುಗಳಿಗೂ ಅಧೀನ ನಾಗಿದೇನೆ. ನಸ್ವತಂತ್ರಃ– ಆದುದರಿಂದಲೇ ನಾನು ನನ್ನ ಸ್ವೇಚ್ಛೆಯಂತೆ ನಡೆಯುವವನಲ್ಲ.

· ಈ ವಿಧವಾದ ಪಾರತಂತ್ರ್ಯದಲ್ಲಿ ಆದರ ವಿರುವುದರಿಂದಲೇ ತಿರುಗಿಯೂ ಅದನ್ನೇ ಒತ್ತಿಹೇಳುವನು, 'ಪ್ರಭವತಿ ಸಂಯಮನೇ ಮಮಾಪಿ ವಿಷ್ಣುಃ'— ನನ್ನನ್ನು ನಿಯಮಿಸುವವನೂ ಆ ವಿಷ್ಣುವೇ; ಅವನೇ ನನಗೆ ಪ್ರಭುಃ. ನಾನು ಪಾಪಿಗಳಿಗೆ ನಿಯಾಮಕನಾದ್ದರಿಂದ ಕೆಲವ ವಿಷಯದಲ್ಲಿ ಮಾತ್ರ ಯಮ ನೆನಿಸಿಕೊಂಡಿದ್ದೇನೆ, ವಿಷ್ಣುವು ನನ್ನನ್ನೂ ನಿಯಮಿಸುವವನಾದ್ದರಿಂದ ಅವನು ನನಗೂ ಯಮ.

ಶ್ರುತಿಯೂ ಸಹ 'ಭೀಷಾಸ್ಮಾದ್ವಾತಃಪವತೇ — ಭೀಷೋದೇತಿ ಸೂರ್ಯಃ ಭೀಷಾಸ್ಮಾದಗ್ನಿ ಶ್ಚೇಂದ್ರಶ್ಚ, ಮೃತ್ಯುರ್ಧಾವತಿ ಪಂಚಮಃ ಇತಿ ವಾಯು, ಸೂರ್ಯ, ಅಗ್ನಿ, ಇಂದ್ರ, ಯಮ ಇವರೆಲ್ಲರೂ ಸರ್ವೇಶ್ವರನ ಆಜ್ಞೆಗೆ ತಪ್ಪಿನಡೆದರೆ ಏನಾದೀತೋ? ಎಂದು ಹೆದರಿ ತಮ್ಮ ತಮ್ಮ ಎಲ್ಲೆಯಲ್ಲಿ ತಮ್ಮ ಕೆಲಸಗಳನ್ನು ನಡೆಸುತ್ತಿದ್ದಾರೆಂದು ಹೇಳಿದೆ, 'ಯಮ, ನೋಡುದಕ್ಕೆ ಈ ರೀತಿ ಅರ್ಥಕ್ಕೆ ಸಂವಾದವೂ ಇದೆ.

ಯಮೋವೈವಸ್ವತೋ ರಾಜಾ ಯಸ್ತವೈಷಹೃದಿಸ್ಥಿತಃ ।
ತೇನ ಚೇದವಿವಾದಸ್ತೇ ಮಾ ಗಂಗಾಂ ಮಾಕುರೂನ್ ಗಮಃ ॥

ಯಮಃ— ಸರ್ವನಿಯಾಮಕನೂ, ವೈವಸ್ವತಃ— ಸೂರ್ಯಮಂಡಲಾಂತರ್ವ ರ್ತಿಯೂ, ರಾಜಾ— ಎಲ್ಲರನ್ನೂ ಪ್ರೀತಿಯಿಂದ ಕಾಣುವವನೂ ಆದ, ಯ ಏಷಃ— ಯಾವ ಈ ಭಗವಂತನು, ತವ— ನಿನ್ನ, ಹೃದಿ— ಹೃದಯದಲ್ಲಿ ಸ್ಥಿತಃ— ಅಂತರ್ಯಾಮಿಯಾಗಿ ನೆಲಸಿರುವನೋ, ತೇನ — ಅವನೊಡನೆ, ತೇ— ನಿನಗೆ, ಅವಿವಾದಃ ಚೇತ್— ಚರ್ಚೆಯಿಲ್ಲದಿದ್ದರೆ, ಗಂಗಾಂ ಮಾಗಮಃ —ಗಂಗಾ ಯಾತ್ರೆಗೆ ಹೋಗಬೇಡ, ಕುರೂನ್ ಮಾಗಮಃ— ಕುರುಕ್ಷೇತ್ರಕ್ಕೆ ಹೋಗಬೇಡ, ಎಂದರ್ಥ.

ಯಮಃ— 'ಯಃ ಪೃಥಿವೀಮನ್ತರೋಯಮಯತಿ' ಯಆತ್ಮಾನ ಮನ್ತರೋಯಮಯತಿ, ಇತ್ಯಾದಿ ಶ್ರುತಿಗಳಂತೆ ಚೇತನಾ ಚೇತನಗಳ ಒಳಹೊಕ್ಕು ನಿಯಾಮಕನಾಗಿರುವನೆಂದರ್ಥ, ವೈವಸ್ವತಃ— ಅಂತಸ್ತ ದ್ಧರ್ಮೋಪದೇಶಾತ್, ಎಂಬ ಬ್ರಹ್ಮಸೂತ್ರದಲ್ಲಿ ಹೇಳಿರುವಂತೆ ಪರಬ್ರಹ್ಮಾ ಸಾಧಾರಣ ಗುಣಗಳುಳ್ಳ ಆ ಸೂರ್ಯಮಂಡಲಾಂತರ್ವರ್ತಿಯಾದ, ರಾಜಾ— ಸರ್ವಜನರಂಜಕನಾದ, ಪ್ರಸಿದ್ಧ ಯಮನಾದರೆ ಇವನನ್ನು ಬೆಂಕಿಯಲ್ಲಿ

ಸುಡು, ಎಣ್ಣೆಯಲ್ಲಿ ಬೇಯಿಸು, ಎನ್ನುವನು; ಈ ಯಮಹಾಗಿಲ್ಲ ವೆಂದರ್ಥ. ಯಸ್ತ್ವೈಷಹೃದಿಸ್ಥಿತಃ– 'ಸರ್ವಸ್ಯಚಾಹಂ ಹೃದಿಸನ್ನಿವಿಷ್ಟಃ' 'ಈಶ್ವರಸ್ಸರ್ವಭೂತಾನಾಂ ಹೃದ್ದೇಶೇರ್ಜುನ ತಿಷ್ಠತಿ, ಭ್ರಾಮಯನ್ ಸರ್ವಭೂತಾನಿ' ಇತ್ಯಾದಿ ಪ್ರಮಾಣಗಳಂತೆ ಸರ್ವಾಂತರ್ಯಾಮಿ ಯೆಂದರ್ಥ, ಅವಿವಾದಃ 'ತ್ವಂಮೇಽಹಂಮೇ' ಇತ್ಯಾದಿ ಪದ್ಯದಲ್ಲಿ ಆಚಾರ್ಯರು ಅನುಗ್ರಹಿಸಿರುವಂತೆ ನನಗೆ ನಾನು ಸ್ವತಂತ್ರ; ನಿನಗೆ ಆಳಲ್ಲ, ವೆಂಬ ಜಗಳ ವಿಲ್ಲದೆ ಅವನು ಅಂತರ್ಯಾಮಿಯಾಗಿರುವನೆಂದು ಒಪ್ಪಿಕೊಂಡರೆ ಸಾಕು; ಮಾಗಂಗಾಂ ಮಾಕುರೂನ್ ಗಮಃ – ಗಂಗೆಯು ಎಲ್ಲಾ ತೀರ್ಥಗಳಿಗೂ ಉಪಲಕ್ಷಕ, ಕುರುಕ್ಷೇತ್ರ ಎಲ್ಲಾ ಪುಣ್ಯಕ್ಷೇತ್ರಗಳಿಗೂ ಉಪಲಕ್ಷಕ, ಅಂದರೆ—

ಭಗವಂತನು ನನಗೆ ಅಂತರ್ಯಾಮಿಯಾಗಿರುವನೆಂಬ ಅಂಶವನ್ನು ಸಮ್ಮತಿಸಿದ್ದೇ ಆದ್ದರೆ ಸಾಕು. ಗಂಗಾದಿ ತೀರ್ಥಯಾತ್ರೆಯೂ ಬೇಡ. ಕುರುಕ್ಷೇತ್ರಾದಿ ಪುಣ್ಯಕ್ಷೇತ್ರಯಾತ್ರೆಯೂ ಬೇಡ. ಅಂತರ್ಯಾಮಿ ಭಗವತ್ಸ್ವರೂಪವನ್ನು ತಿಳಿದಿರುವನಲ್ಲೇ ಎಲ್ಲಾ ತೀರ್ಥಕ್ಷೇತ್ರಗಳೂ ವಾಸಿಸುತ್ತವೆ. ಎಂದುತಾತ್ಪರ್ಯ.

ಸರ್ವಪಾಪಗಳಿಗೂ, ತಾಮ್ರ ಹಿತ್ತಾಳೆ ಇತ್ಯಾದಿ ಪದಾರ್ಥಗಳಿಗೆಲ್ಲಾ ಶುದ್ಧಿಕ್ರಮವನ್ನು ಹೇಳುತ್ತಾಬಂದ ಯಾಜ್ಞವಲ್ಕ್ಯರು ತಮ್ಮ ಸ್ಮೃತಿಯಲ್ಲಿ 'ಕ್ಷೇತ್ರಜ್ಞಸ್ಯೇಶ್ವರಜ್ಞಾನಾ ದ್ವಿಶುದ್ಧಿಃ ಪರಮಾಮತಾ' ಎಂದುಹೇಳಿದ್ದಾರೆ. ಜೀವಾತ್ಮನಿಗೆ ನನಗೆ ನಾನು ಸ್ವತಂತ್ರನೆಂದೂ ಈಶ್ವರಪರತಂತ್ರನಲ್ಲವೆಂದೂ ತಿಳಿಯುವುದೇ ಮಹಾಪಾಪ; ಅದೇ ಅಶುದ್ಧಿ; ಈ ಅಶುದ್ಧಿಹೋಗಬೇಕಾದರೆ ಭಗವಂತನು ನನಗೆ ಅಂತರ್ಯಾಮಿ; ಅವನು ಒಡೆಯ; ನಾನು ಅವನ ಸ್ವತ್ತು ಎಂದು ತಿಳಿಯಬೇಕು. ಇದೀಗ ಜೀವಾತ್ಮನಿಗೆ ಉತ್ತಮೋತ್ತಮಶುದ್ಧಿ; ತೀರ್ಥಗಳಲ್ಲಿ ಮಿಂದು ಮೈತೊಳೆಯುವುದು ಮಾತ್ರ ಶುದ್ಧಿಯಲ್ಲ ಎಂದುತಾತ್ಪರ್ಯ

ಇಲ್ಲಿ ಶ್ರೀಧರಸ್ವಾಮಿಗಳು (ವಿಷ್ಣುಪುರಾಣವ್ಯಾಖ್ಯಾಕರ್ತೃ) ಹರಿರೇವ ಗುರುಃ ಎಂದು ಕರ್ಮಧಾರಯ ಸಮಾಸ ಮಾಡಿ ವ್ಯಾಖ್ಯಾನ ಮಾಡಿದಾರೆ. ಇದುಯುಕ್ತಿಯುಕ್ತವಲ್ಲ. ಹರೇಃ ಗುರೂಣಾಂಚ ಎಂದು ದ್ವಂದ್ವಸಮಾಸ ಮಾಡಬೇಕು. ಗೀತಾಚಾರ್ಯನು 'ದ್ವಂದ್ವಸ್ಸಾಮಾಸಿಕಸ್ಯಚ' ಒಂದೊಂದೇ ಪದಾರ್ಥ ಪ್ರಧಾನವಾದ ಇತರ ಸಮಾಸಗಳಿಗಿಂತಲೂ ಉಭಯ ಪದಾರ್ಥ ಪ್ರಧಾನ

ವಾದ ದ್ವಂದ್ವಸಮಾಸವು ಉತ್ತಮವು ಎಂದು ಹೇಳಿದ್ದಾನೆ. ಮತ್ತು ಭಗವದ್ಭಕ್ತರ ಮಹಿಮೆಯನ್ನು ವರ್ಣಿಸುವ ಪ್ರಕರಣವಾದುದರಿಂದಲೂ, 'ಹರೇಃ ಗುರೂಣಾಂಚ" ಎಂದು ಹೇಳಬೇಕು. ಮುಂದೆಯೂ 'ತ್ಯಜಭಟದೂರತರೇಣ ತಾನಪಾಪಾನ್' ಎಂದು ಹೇಳಿದಾನೆ. ಆದಕಾರಣ ಗುರುಶಬ್ದಕ್ಕೆ ಮುಂದೆ ಹೇಳಲ್ಪಡುವ ಗುಣಲಕ್ಷಣಗಳುಳ್ಳ ವೈಷ್ಣವರು ಎಂದೇ ಅರ್ಥ. ಈ ಪ್ರಸಿದ್ಧ ಯಮನು ಅವರಿಗೆ ಅಧೀನನೇ ಅಹುದು ||೨||

ಭಟನು, ವಿಷ್ಣು ಯಾರು ? ನೀನು ಅವನಿಗೆ ಪರತಂತ್ರ ಹೇಗೆ ? ಎಂದು ಕೇಳಿದ; ಅದಕ್ಕೆ ಯಮನು 'ಕಟಕಮುಕುಟ' ಇತ್ಯಾದಿ ಎರಡು ಶ್ಲೋಕಗಳಿಂದ ಉತ್ತರಿಸುವನು. ಮೊದಲನೇ ಶ್ಲೋಕದಲ್ಲಿ ವಿಷ್ಣುವೇ ಜಗದುಪಾದಾನ ಕಾರಣನು. ಆದರೆ ಜಗತ್ತಿನಲ್ಲಿನ ವಸ್ತುಗಳ ಹೇಯಗುಣಗಳು ಇವನಿಗೆ ಅಂಟುವುದಿಲ್ಲ. ಅವನು ಸಮಸ್ತ ಕಲ್ಯಾಣಗುಣಾಕರನೂ ಹೌದು. ಆದುದರಿಂದಲೇ ಅವನು ಎಲ್ಲಕ್ಕಿಂತ ಮಿಗಿಲಾದ ವಸ್ತು—ಪರಾತ್ಪರವಸ್ತುವೆಂದೂ, ಎರಡನೇ ಶ್ಲೋಕದಲ್ಲಿ ಲಯಕಾರಣನೂ ಅವನೇ. ಆದರಿಂದಲೂ ಅವನೇ ಸರ್ವಸ್ಮಾತ್ಪರನೆಂದೂ ಹೇಳುತ್ತಾನೆ.

ಕಟಕಮುಕುಟಕರ್ಣಿಕಾದಿಭೇದೈಃ
ಕನಕ ಮಭೇದಮ ಪೀಕ್ಷ್ಯತೇಯಥೈಕಂ||
ಸುರಪಶುಮನುಜಾದಿಕಲ್ಪನಾಭಿಃ
ಹರಿರಖಿಲಾಭಿರುದೀರ್ಯತೇ ತಥೈಕಃ ||೩||

ಕ್ಷಿತಿತಲಪರಮಾಣವೋಽನಿಲಾಂತೇ
ಪುನರಪಿಯಾಂತಿ ಯಥೈಕತಾಂ ಧರಿತ್ರ್ಯಾ ||
ಸುರಪಶುಮನುಜಾದಯಸ್ತಥಾಂತೇ
ಗುಣಕಲುಷೇಣ ಸನಾತನೇನ ತೇನ ||೪||

ಚಿನ್ನದ ಗಟ್ಟಿಯು—ಗಟ್ಟಿಯರೂಪತಾಳಿರುವಾಗ, ಬಳೆ ಕಿರೀಟ—ಮುಂತಾಗಿ ಭೇದವಿರುವುದಿಲ್ಲ. ಮತ್ತು 'ಚಿನ್ನದ ಗಟ್ಟಿ ಒಂದೇ ಒಂದು' ಎಂದೂ ವ್ಯವಹರಿಸಲ್ಪಡುತ್ತದೆ. ಬಳೆ ಕಿರೀಟ—ಇತ್ಯಾದಿ ಬೇರೆಬೇರೆ ಹೆಸರುಗಳನ್ನೂ

ಅದಕ್ಕೆ ತಕ್ಕ ಬೇರೆಬೇರೆ ಆಕಾರಗಳನ್ನೂ ತೋರಿದಿರುವುದೇ ಇದಕ್ಕೆ ಕಾರಣ. ಅದೇ ಗಟ್ಟಿಯು ಬಳೆ–ಕಿರೀಟ–ಬಾವುಲಿ, ಮುಂತಾದ ಆಭರಣಗಳ ದಶೆಯನ್ನು ಹೊಂದಿದಾಗ (ರೂಪವನ್ನೂ ತಾಳಿದಾಗ) ಆಯಾ ಆಕಾರ ವ್ಯತ್ಯಾಸವೂ–ಬೇರೆಬೇರೆ ಹೆಸರುಗಳೂ ಬರುತ್ತವೆ, ಆಗ ಇದು ಬಳೆ ಬಾವುಲಿ–ಇತ್ಯಾದಿಯಾಗಿ ಬೇರೆಬೇರೆ ವಸ್ತುಗಳು ಎಂದು ಭೇದವನ್ನು ತಿಳಿಯುವನು ಮತ್ತು ಹಾಗೆಯೇ ವ್ಯವಹರಿಸುವನು.

ಹೀಗೆಯೇ ಪರಬ್ರಹ್ಮವು ಜಗತ್ಕಾರಣವಾಗಿರುವ ಅವಸ್ಥೆಯಲ್ಲಿ ಅಂದರೆ ಸೃಷ್ಟಿಗೆ ಮೊದಲು ಈ ಪ್ರಪಂಚದಲ್ಲಿ ಕಾಣುವ ವಸ್ತುಗಳ ಆಕಾರ–ಹೆಸರುಗಳೊಂದೂ ಇಲ್ಲದ ಕಾರಣ. ಸೂಕ್ಷ್ಮಚಿದಚಿತ್ತುಗಳನ್ನೇ ಶರೀರವಾಗಿ ಉಳ್ಳ ವಿಷ್ಣುವೊಬ್ಬನೇ ಒಬ್ಬ; ಎಂದು ಹೇಳಲ್ಪಡುತ್ತಾನೆ. ಬಳೆ ಕಿರೀಟ ಮುಂತಾದ್ದ ವಸ್ತುಗಳೆಲ್ಲಾ ಆ ಚಿನ್ನದ ಗಟ್ಟಿಯಲ್ಲೇ ಅಡಗಿವೆಯಲ್ಲವೆ? ಆದರಂತೆ.

ಆ ವಿಷ್ಣುವೊಬ್ಬನೇ ವ್ಯಷ್ಟಿಸೃಷ್ಟಿದಶೆಯಲ್ಲಿ–ದೇವ–ಮನುಷ್ಯ–ತಿರ್ಯಕ್–ಸ್ಥಾವರಗಳೆಂಬ ನಾಲ್ಕು ಪ್ರಕಾರವಾದ ಶರೀರಗಳನ್ನೂ. ಆ ಶರೀರಗಳಲ್ಲಿ ಪ್ರವೇಶಿಸಿರುವ ಜೀವಾತ್ಮ ರೂಪಗಳನ್ನೂ ಆ ದೇವಾದಿಗಳಿಗೆ ಗೊತ್ತಾದ ಆಕಾರಗಳನ್ನೂ, ಹೆಸರುಗಳನ್ನೂ ಪಡೆಯುತ್ತಾನೆ. ಅಂದರೆ ಸ್ಥೂಲಚಿದಚಿತ್ತುಗಳನ್ನೇ ಶರೀರವಾಗುಳ್ಳವನಾಗಿ–ಇವನು ದೇವತೆ–ಇವನು ಮನುಷ್ಯ–ಇತ್ಯಾದಿ ಭೇದಗಳಿಂದ ವ್ಯವಹರಿಸಲ್ಪಡುತ್ತಾನೆ. ಎಂದು ಮೊದಲು ಶ್ಲೋಕದ ತಾತ್ಪರ್ಯ.

ಛಾಂದೋಗ್ಯೋಪನಿಷತ್ತಿನ ಸದ್ವಿದ್ಯಾ ಪ್ರಕರಣದಲ್ಲಿ ಹೇಳಿರುವ ಎಲ್ಲಾ ಅರ್ಥವಿಶೇಷಗಳೂ ಇಲ್ಲಿಗೆ ಸಮನ್ವಯವಾಗುವುವು. ಅಲ್ಲಿ 'ಯಥಾಸೋಮ್ಯೈಕೇನ ಲೋಹಮಣಿನಾ ಸರ್ವಂ ಲೋಹಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋನಾಮಧೇಯಂ ಲೋಹಮಿತ್ಯೇವ ಸತ್ಯಂ' ಎಂಬ ವಾಕ್ಯದಲ್ಲಿ ಹೇಳಿರುವ ಅಂಶವೇ ಇಲ್ಲಿ ಅನುವಾದ ಮಾಡಲ್ಪಟ್ಟಿದೆ. ಉಪಬೃಂಹಣ ಮಾಡಲ್ಪಟ್ಟಿದೆ. ಲೋಹಮಣಿ ಎಂದರೆ ಚಿನ್ನದ ಗಟ್ಟಿ. ಇಲ್ಲಿ ಬ್ರಹ್ಮ ಸೂತ್ರದಲ್ಲಿನ ಈಕ್ಷತ್ಯಧಿಕರಣ ಪ್ರಕೃತ್ಯಧಿಕರಣ ಆರಂಭಣಾಧಿಕರಣಗಳಲ್ಲಿ ಹೇಳಿರುವ ಎಲ್ಲಾ ಅರ್ಥಗಳೂ ಈ ಶ್ಲೋಕದಲ್ಲಿ ಗರ್ಭಿತವಾಗಿವೆ.

"ಸದೇವ ಸೋಮ್ಯೇದ ಮಗ್ರ ಆಸೀದೇಕಮೇವಾದ್ವಿತೀಯಂ" ಹೇ ಸೋಮ್ಯ! ಎಲೈ ಸೋಮಪಾನಾರ್ಹನಾದ ಶ್ವೇತಕೇತುವೇ! ಇದಂ–ಈ ಕಣ್ಣೆದುರಿಗೆ ಕಾಣುವ ಅಂದರೆ ಹೆಸರು, ಆಕಾರಗಳು ಬೇರೆಬೇರೆಯಾಗಿ ಸ್ಪಷ್ಟವಾಗಿ ಕಾಣುವುದರಿಂದ ಸ್ಥೂಲವೆನಿಸಿಕೊಂಡಿರುವ ಈ ಸಮುದ್ರ, ಭೂಮಿ, ಪರ್ವತಾದಿಗಳೆಲ್ಲವೂ, ಅಗ್ರೇ–ಸೃಷ್ಟಿಗೆ ಮೊದಲು; ಅಂದರೆ–ಪ್ರಳಯದ ದಶೆಯಲ್ಲಿ, ಸದೇವ ಆಸೀತ್–'ಸತ್' ಎಂಬ ಶಬ್ದದಿಂದ ಹೇಳಲ್ಪಡುವ ಪರಬ್ರಹ್ಮವಾಗಿಯೇ ಇತ್ತು. ಪರಬ್ರಹ್ಮವು ಇವಕ್ಕೆಲ್ಲಾ ಅಂತರ್ಯಾಮಿಯಾಗಿರುವುದರಿಂದ "ಪರಬ್ರಹ್ಮವೊಂದೇ ವಸ್ತು" ಎಂದು ಹೇಳಲ್ಪಡುತ್ತಿತ್ತು. ಹೇಗೆಂದರೆ–ಕುಂಬಾರನ ಮನೆ ಬಾಗಿಲಲ್ಲಿ ಬೆಳಿಗ್ಗೆ ಹೋದವನು ಚಕ್ರದ ಮೇಲೆ ಮಣ್ಣು ಮುದ್ದೆಯನ್ನು ನೋಡಿರುತ್ತಾನೆ. ಅವನು ಪುನಃ ಆ ಕಡೆಯಿಂದ ಮಧ್ಯಾಹ್ನ ಹಿಂತಿರುಗಿ ಬಂದಾಗ, ಗಡಿಗೆ, ಶ್ರಾವೆ ಮುಂತಾದವುಗಳೆಲ್ಲಾ ಅಂಗಳದಲ್ಲಿ ಹರಡಿವೆ. ಅದನ್ನು ಅವನು ನೋಡಿ ಪಕ್ಕದವನೊಂದಿಗೆ ಈಗ ಕಾಣುವ ಈ ಗಡಿಗೆ. ಶ್ರಾವೆ ಇಷ್ಟೆಲ್ಲಾ ಪದಾರ್ಥಗಳೂ ಬೆಳಿಗ್ಗೆ ಬರೀ ಒಂದೇ ಒಂದು ಮಣ್ಣು ಮುದ್ದೆಯಾಗಿತ್ತು. ಎಂದು ಹೇಳುವನೋ; ಹಾಗೆಯೇ "ಪರಬ್ರಹ್ಮವೊಂದೇವೊಂದಿತ್ತು" ಎಂದು ಅರ್ಥ. ಈಗ ಸಮುದ್ರ, ಭೂಮಿ, ಪರ್ವತಗಳೆಂಬ ಬೇರೆಬೇರೆ ಹೆಸರುಗಳನ್ನೂ ಬೇರೆಬೇರೆ ಆಕಾರಗಳನ್ನೂ ಹೊಂದಿ ಅನೇಕವೆನಿಸಿಕೊಂಡು ಸ್ಥೂಲವಾಗಿಯೂ ಇರುವ ಈ ವಸ್ತುಗಳೆಲ್ಲಾ ಸೃಷ್ಟಿಗೆ ಮೊದಲು ಈ ನಾಮ ರೂಪಗಳಿಲ್ಲದುದರಿಂದ ಒಂದೆನಿಸಿಕೊಂಡಿದ್ದುವು ಎಂದು ತಾತ್ಪರ್ಯ. ಸೂಕ್ಷ್ಮ–ಎಂದರೆ ಹೆಸರು ಆಕಾರವಿಲ್ಲದಿರುವ ಸ್ಥಿತಿ; ಸ್ಥೂಲವೆಂದರೆ ಹೆಸರು ಆಕಾರವಿರುವ ಸ್ಥಿತಿ.

ಈ ರೀತಿ ಹೇಳುವುದರಿಂದ ಆ ಸಚ್ಛಬ್ದವಾಚ್ಯವಾದ ಪರಬ್ರಹ್ಮವೇ ಈ ಜಗತ್ತಿಗೆ ಉಪಾದಾನಕಾರಣವೆಂದೂ, ಕಾರ್ಯಭೂತ ವಸ್ತುವು ಕಾರಣದಲ್ಲೇ ಅಡಗಿರುವುದರಿಂದ ಕಾರ್ಯಕಾರಣಗಳೆರಡೂ ಒಂದೇ ಎಂಬ ಅಂಶವೂ ಫಲಿತವಾಗುವುದು. ಅದ್ವಿತೀಯಂ ಆಸೀತ್–ನಿಮಿತ್ತ ಕಾರಣವಾಗಿಯೂ ಆಗಿತ್ತು. ಲೋಕದಲ್ಲಿ ಉಪಾದಾನ ಕಾರಣ (ಮೂಲಕಾರಣ) ಬೇರೆ. ನಿಮಿತ್ತ ಕಾರಣಬೇರೆ. ಗಡಿಗೆಗೆ ಮಣ್ಣು ಮೂಲ ಕಾರಣ. ಕುಂಬಾರ ನಿಮಿತ್ತ ಕಾರಣ. ಪರಬ್ರಹ್ಮ ಹಾಗಲ್ಲ. ಉಪಾದಾನ ಕಾರಣವೂ ಅದೇ; ನಿಮಿತ್ತ ಕಾರಣವೂ ಅದೇ ಎಂದು ತಾತ್ಪರ್ಯ.

Funding: Tattva Heritage Foundation,Kolkata. Digitization: eGangotri.



ಇದು ಜಗತ್ತಿಗೆ ಕಾರಣವಾವುದೆಂದು ವಿವರಿಸುವ ಪ್ರಕರಣವಾದುದರಿಂದಲೂ 'ಸದೇವ' ಎಂದು ಉಪಾದಾನ ಕಾರಣವನ್ನು ಹೇಳಿರುವುದರಿಂದಲೂ ಈಗ ನಿಮಿತ್ತ ಕಾರಣವನ್ನು ಅವಶ್ಯ ಹೇಳಲೇ ಬೇಕು. ಆದಕಾರಣ-ಅದ್ವಿತೀಯಂ ಎಂದರೆ ತನಗಿಂತಲೂ ಬೇರೆಯಾದ ನಿಮಿತ್ತ ಕಾರಣವಿಲ್ಲದುದಾಗಿತ್ತು ಎಂದು ಅರ್ಥ.||೩||

ಇವನೇ ಪ್ರಳಯಕಾರಣನೆಂದು ಹೇಳಿ ಇವನ ಪರತ್ವವನ್ನು ನಿರೂಪಿಸುತ್ತಾನೆ. ನೆಲದಲ್ಲಿರುವ ಅತಿ ಸೂಕ್ಷ್ಮವಾದ ಧೂಳುಗಳು ಬಿರುಗಾಳಿ ಬೀಸಿದಾಗ ನೆಲವನ್ನು ಬಿಟ್ಟು ಅನೇಕವಾಗಿ ಕಾಣುತ್ತಾ ಆಕಾಶದಲ್ಲಿ ಸಂಚರಿಸಿ, ಪುನಃ ಗಾಳಿ ನಿಂತ ಮೇಲೆ ಮೊದಲಿನಂತೆಯೇ ನೆಲದೊಳಗೇ ಹೇಗೆ ಅಡಗುವುವೋ; ಹಾಗೆಯೇ ಈಗ ಸುರನರಾದಿ ಭೇದದಿಂದ ಬಹುವಾಗಿ ಕಂಗೊಳಿಸುವ ಈ ಪ್ರಾಣಿಗಳೆಲ್ಲಾ– ವಸ್ತುಗಳೆಲ್ಲಾ ಪ್ರಳಯ ಕಾಲದಲ್ಲಿ ಪರಮಾತ್ಮನಾದ ಹರಿಯಲ್ಲಿ ಅಡಗಿದ್ದು ಒಂದೇ ವಸ್ತುವೆನಿಸಿಕೊಂಡಿತ್ತು ಎಂದು ತಾತ್ಪರ್ಯ.

ಶ್ರುತಿಯು 'ತಮಃ ಪರೇದೇವ ಏಕೀ ಭವತಿ' ಸ್ಥಳದಿಂದ ತೊಡಗಿ ಅಡುದರ ಕಾರಣಗಳಲ್ಲಿ ಲಯವನ್ನು ಅಂದರೆ ಏಕೀಭಾವವನ್ನು ಹೇಳುತ್ತಾ ಬಂದು, ಕೊನೆಗೆ ಪ್ರಕೃತಿಯು ಪರಮಾತ್ಮನಲ್ಲಿ ಏಕೀಭವಿಸುತ್ತದೆ. ಅಂದರೆ ಒಂದಾಗಿ ಅಡಗುವುದುಎಂದು ಹೇಳಿದೆ.

ಇಲ್ಲಿ ನೆಲ ಭೇರೆ; ಅದರಲ್ಲಡಗಿರುವ ಧೂಳುಗಳು ಬೇರೆಬೇರೆ; ಅವೂ ಅನೇಕವಾಗಿವೆ. ಎಂದು ಲೋಕ ಪ್ರಸಿದ್ಧ ವಿಷಯವನ್ನೇ ಉದಾಹರಣೆಯಾಗಿ ಕೊಟ್ಟು ಸುರನರಾದಿಗಳೆಲ್ಲಾ ಹರಿಗಿಂತ ಬೇರೆಯಾದುವೆಂದೂ ಅವುಗಳೂ ಪರಸ್ಪರ ಬೇರೆಬೇರೆಯೆಂದೂ, ಅವು ಅನೇಕವಾಗಿಯೂ ಇವೆಯೆಂದೂ ಸಾಧಿಸಿ, ಧೂಳನ್ನು ಮೇಲಕ್ಕೇಳಿಸುವ ಗಾಳಿಯು ನಿಂತರೆ ಪುನಃ ಅವು ನೆಲದಲ್ಲೇ ಒಂದಾಗಿ ಹೇಗೆ ಅಡಗುವುವೋ ಹಾಗೆಯೇ ಭಗವಂತನ ಸೃಷ್ಟಿ ಸಂಕಲ್ಪವು ನಿಂತರೆ ಆ ಪ್ರಳಯ ಕಾಲದಲ್ಲಿ ಸುರನರತಿರ್ಯಗಾದಿಗಳೆಲ್ಲಾ ಭಗವಂತನಲ್ಲಿ ಒಂದಾಗಿ ಅಡಗುವುವು. (ಏಕೀಭಾವ–ಒಂದಾಗುವಿಕೆ; ಅಂದರೆ ಬೇರೆಬೇರೆ ಭಾಗ ಮಾಡಲು ಆಗದಿರುವ ಸಂಬಂಧ ವಿಶೇಷ) ಎಂದು ನಿರೂಪಿಸಿರುವ ಶ್ರೀ ಪರಾಶರ ಮಹರ್ಷಿಗಳು ಕೇವಲ ಅದ್ವೈತ ವಾಸನೆಯನ್ನೂ ಸಹ ದೂರೀಕರಿಸಿ ವಿಶಿಷ್ಟಾದ್ವೈತವನ್ನೇ ಸ್ಥಾಪಿಸಿರುವರು ||೪||

ಈ ರೀತಿ ವಿಷ್ಣುವೇ ಜಗತ್ಕಾರಣನೆಂದೂ, ಸಮಸ್ತ ಕಲ್ಯಾಣ ಗುಣಾಕರನೆಂದೂ, ಅದರಿಂದಲೇ ಸರ್ವಸ್ಮಾತ್ಪರನೆಂದೂ, ನಿರೂಪಿಸಿ ಈಗ "ಪರಿಹರ ಮಧುಸೂಧನ ಪ್ರಪನ್ನಾನ್" ಎಂದು ಹೇಳಿದ ಅಂಶವನ್ನು ವಿವರಿಸುತ್ತಾನೆ.

ಹರಿಮಮರಗಣಾರ್ಚಿತಾಂಘ್ರಿಪದ್ಮಂ
ಪ್ರಣಮತಿಯಃ ಪರಮಾರ್ಥತೋಹಿಮರ್ತ್ಯಃ॥
ತಮುಪಗತಸಮಸ್ತ ಪಾಪಬಂಧಂ
ವ್ರಜಪರಿಹೃತ್ಯ ಯಥಾಗ್ನಿ ಮಾಜ್ಯಸಿಕ್ತಂ ॥೫॥

ಯಃ–ಯಾವ, ಮರ್ತ್ಯಃ–ಮನುಷ್ಯನು, ಅಮರಗಣಾರ್ಚಿತಾಂಘ್ರಿಪದ್ಮಂ–ಬ್ರಹ್ಮಾದಿದೇವತೆಗಳಿಂದ ಪೂಜಿಸಲ್ಪಟ್ಟ ಪಾದಾರವಿಂದಗಳುಳ್ಳ, ಹರಿಂ–ವಿಷ್ಣುವನ್ನು, ಪರಮಾರ್ಥತಃ–ತ್ರಿಕರಣಗಳಿಂದಲೂ, ಪ್ರಣಮತಿ–ಶರಣ ಹೊಂದಿ ನಮಸ್ಕರಿಸುವನೋ, ಅಪಗತಸಮಸ್ತ ಪಾಪಬಂಧಂ–ನೀಗಿದ ಸಮಸ್ತ ಪಾಪಗಳುಳ್ಳ, ತಂ–ಆ ಭಕ್ತನನ್ನು, ಆಜ್ಯಸಿಕ್ತಂ–ತುಪ್ಪದಿಂದ ತೋಯಿಸಲ್ಪಟ್ಟ, ಅಗ್ನಿಂಯಥಾ–ಅಗ್ನಿಯಂತೆ, ಪರಿಹೃತ್ಯ–ಉದ್ದೇಶಪೂರ್ವಕವಾಗಿ ದೂರ ತೊರೆದು, ವ್ರಜ–ಹೋಗು ಎಂದರ್ಥ.

ಹರಿಂ–"ಹರಿರ್ಹರತಿ ಪಾಪಾನಿ" ಎಂಬಂತೆ ತನ್ನಾಶ್ರಿತರಿಗೆ ತನ್ನನ್ನೂ ಸೇರಲು ಪ್ರತಿಬಂಧಕವಾದ ಪಾಪಗಳನ್ನೆಲ್ಲಾ ನೀಗಿಸುವವನು ಎಂದರ್ಥ. ಇದರಿಂದ "ಸರ್ವ ಪಾಪೇಭ್ಯೋಮೋಕ್ಷಯಿಷ್ಯಾಮಿ" ಎಂಬ ಮೋಕ್ಷಪ್ರದತ್ವವು ಸೂಚಿಸಲ್ಪಡುತ್ತೆ; ಇದಕ್ಕೂ ಕಾರಣವಾದ 'ಕಾರಣಂತುಧ್ಯೇ ಯಃ' ಎಂಬ, ಜಗತ್ಕಾರಣತ್ವವೂ ಕಾರಣಭೂತವಾದ ವಸ್ತುವೇ ಉಪಾಸ್ಯವೆಂದೂ ಸೂಚಿಸಲ್ಪಡುವುದರಿಂದ ದ್ವಯಮಂತ್ರದಲ್ಲಿ ಹೇಳುವ ನಾರಾಯಣ ಪದಕ್ಕೆ ಈ ಹರಿಶಬ್ದ ಪರ್ಯಾಯಪದವಾಗುವುದೆಂದು ತಾತ್ಪರ್ಯ. ಮತ್ತೂ

"ಬ್ರಹ್ಮಾಣ ಮಿಂದ್ರಂ ರುದ್ರಂಚ ಯಮಂವರುಣ ಮೇವಚ ।
ಪ್ರಸಹ್ಯಹರತೇಯಸ್ಮಾತ್ತಸ್ಮಾದ್ಧರಿರಿತೀರ್ಯತೇ॥" ಎಂಬ ವಚನದಂತೆ ಸರ್ವ ಸಂಹಾರಕಾರಿಯೆಂದು ಹೇಳಿ ಇವನ ಪರತ್ವವನ್ನು ಹೇಳುತ್ತೆ.

ಆದುದರಿಂದಲೇ ಅಮರಗಣಾರ್ಚಿತಾಂಘ್ರಿಪದ್ಮಂ–ಬ್ರಹ್ಮಾದಿ ಸಕಲ ದೇವತೆಗಳೂ ಪರಮಭೋಗ್ಯವಾದ ಇವನ ಪಾದಗಳನ್ನೇ ಧೂಪದೀಪಗಳಿಂದ ಅರ್ಚಿಸುವರು. ಹೀಗೆ ಅಮರರು–ಮರಣವಿಲ್ಲದವರು; ಅಂದರೆ ಪ್ರಳಯ ಕಾಲದವರೆಗೂ ಮರಣವಿಲ್ಲದವರು ಎಂದರ್ಥ. ಪ್ರಳಯದಲ್ಲಿ ಅವರಿಗೂ ಸಾವುಂಟಾದ್ದರಿಂದ ನಮ್ಮಗಳಿಗಿಂತಲೂ ಹೆಚ್ಚು ಕಾಲ ಬದುಕುವವರೆಂದು ತಾತ್ಪರ್ಯ. ಈ ರೀತಿ ಅಮರರಾಗಿ ಜ್ಞಾನಶಕ್ತಿಗಳಿಂದ ಉತ್ಕೃಷ್ಟರಾಗಿರುವವರೇ ಇವನನ್ನು ಆಶ್ರಯಿಸಿದ ಮೇಲೆ ನೀರು ಗುಳ್ಳೆಯಂತೆ (ಮರ್ತ್ಯಾಃ) ಮರಣವೇ ಸ್ವಭಾವವಾಗಿರುವ ಮತ್ತು ಜ್ಞಾನಶಕ್ತ್ಯಾದಿಗಳಿಂದ ಬಹಳ ಕೀಳಾಗಿರುವ ಮನುಷ್ಯರು ಇವನನ್ನು ಆಶ್ರಯಿಸಲೇಬೇಕೆಂದು ಹೇಳಬೇಕಿಲ್ಲ.

ಇನ್ನು ಪ್ರಸನ್ನ ಶಬ್ದಾರ್ಥವನ್ನು ತಿಳಿಸುವನು. ಯಃ ಪರಮಾರ್ಥತಃ ಪ್ರಣಮತಿ–ಇಲ್ಲಿ 'ನಮತಿ' ಎಂದು ನಮಸ್ಕಾರ ಹೇಳಿರುವುದರಿಂದ ಶರೀರ ಮುಖೇನ ಮಾಡುವ (ಕಾಯಿಕ) ಪ್ರಪತ್ತಿ ಹೇಳಲ್ಪಡುತ್ತೆ. 'ಪ್ರ' ಎಂಬ ಉಪ ಸರ್ಗಕ್ಕೆ ಪ್ರಕರ್ಷವೆಂದರ್ಥ; ಅಂದರೆ ಸ್ವಸ್ವಾಮಿಭಾವ ಸಂಬಂಧಜ್ಞಾನ ಪೂರ್ವಕವಾಗಿ ಭಕ್ತಿಭಾವದಿಂದ ತಲೆಬಾಗಬೇಕೆಂದು ತಾತ್ಪರ್ಯ. ಇದರಿಂದ ಮಾನಸಿಕ ಪ್ರಪತ್ತಿಯೂ ಹೇಳಲ್ಪಟ್ಟಿತು. ಪರಮಾರ್ಥತಃ–ತಾತ್ವಿಕವಾಗಿ. ತಾತ್ವಿಕ ಎಂದರೆ ಯಥಾವಸ್ಥಿತರೂಪ; ವಸ್ತು ಹೇಗಿದೆಯೋ ಅದನ್ನು ಹಾಗೆಯೇ ಅರಿಯುವಿಕೆ.

ಅದೇನೆಂಬುದನ್ನು ಶ್ರೀ ಪರಾಶರಭಟ್ಟರವರು ಅನುಗ್ರಹಿಸಿರುವರು. " ಉಪಾಯೋಪೇ ಯತ್ವೇತದಿಹತವ ತತ್ತ್ವಂ " ಎಂದು.

ಶ್ರೀ ವೇದಾಂತದೇಶಿಕರೂ ಸಹ—" ದೀಪಪ್ರಕಾಶ ತದಿಹತ್ವವಾಪ್ತ ಯೇತ್ವಾಮವ್ಯಾಜಸಿದ್ಧಮನಪಾಯ ಮುಪಾಯ ಮಾಹುಃ " ಎಂದಿರುವರು. ಭಗವಂತನ್ನೇ ಉಪಾಯ ಮತ್ತು ಅವನೇ ಉಪೇಯವೆಂಬ ಅಂಶವೀಗ ಯಥಾವಸ್ಥಿತರೂಪ; ತತ್ತ್ವ " ಅವ್ಯಾಜಸಿದ್ಧಂ " ಎಂಬ ಪದದಿಂದ " ಪರಮಾರ್ಥ " ಶಬ್ದವು ವಿವರಿಸಲ್ಪಟ್ಟಿದೆ.

ಇದರಿಂದ ಶ್ರಿಯಃ ಪತಿಯಾಗಿ ಸ್ವಾಮಿತ್ವ ಶರಣ್ಯತ್ವಾದಿ ಗುಣ ಪೂರ್ಣನಾದ ನಾರಾಯಣನೇ ಉಪಾಯೋಪೇಯಗಳೆಂಬ ಅರ್ಥವನ್ನು ಸ್ಪಷ್ಟ ವಾಗಿ ಪ್ರತಿಪಾದಿಸುವ ದ್ವಯಮಂತ್ರ ಅಥವಾ ಮಂತ್ರರತ್ನವನ್ನು ಅನು

ಸಂಧಾನ ಮಾಡಬೇಕೆಂಬ ಅಂಶವು ಸೂಚಿತವಾಗುವುದು. ಆದುದರಿಂದ ವಾಚಿಕವಾದ ಪ್ರಪತ್ತಿಯೂ ಹೇಳಲ್ಪಟ್ಟಿತು. "ದ್ವಯವಕ್ತಾ" ಎಂದು ಗದ್ಯ ತ್ರಯದಲ್ಲಿ ಶ್ರೀಭಾಷ್ಯಕಾರರು ಅನುಗ್ರಹಿಸಿರುವರು. ಇಲ್ಲಿಯೂ ಸಹ ಮುಂದೆ "ಭವಶರಣಮಿತೀರಯಂತಿಯೇವ್ಯೈ" ಎಂದು "ನೀನೇ ಶರಣವಾಗು" ಎಂದು ಹೇಳುವುದೇ ಪ್ರಪತ್ತಿಯೆಂದೂ ಹೇಳಿದೆ.

ಈ ದ್ವಯಮಂತ್ರಾನು ಸಂಧಾನ ಮಾಡುವ ಶ್ರೀ ವೈಷ್ಣವನಿಗೇ ನಿತ್ಯ ಸೂರಿಗಳಿಂದ ಪರಿದೃಶ್ಯಮಾನವಾದ ಮೋಕ್ಷವೆಂದು ಪಾದ್ಮೋತ್ತರ ಖಂಡದಲ್ಲಿ (ಖಂಡ ೬ ಅ ೨೫೧-೨೫೪-೨೫೭) ಸ್ಪಷ್ಟವಾಗಿ ಹೇಳಿದೆ. ವಿಸ್ತಾರವಾಗುವುದೆಂದು ಆ ವಚನಗಳನ್ನು ಇಲ್ಲಿ ಉದಹರಿಸಲಿಲ್ಲ.

ಭಟನು ಮುಂದೇನು ? ಎಂದು ಕೇಳಿದ; 'ತಮಪಗತಸಮಸ್ತ ಪಾಪ ಬಂಧಂ ಪರಿಹೃತ್ಯ ವ್ರಜ"– ಇಂತಹ ಭಗವತ್ಪ್ರಪನ್ನನ ಕಣ್ಣಿಗೇ ಬೀಳದಂತೆ ಬೇರೆಡೆಗೆ ತೆರಳು. "ಅಪಗತಸಮಸ್ತ ಪಾಪಬಂಧಂ" ಎಂಬುದು 'ಹರಿ' ಶಬ್ದದ ವಿವರಣೆ. ನಾನು ಪಾಪಿಗಳಿಗೇ ಪ್ರಭುವು; ಪುಣ್ಯಶಾಲಿಗಳಿಗಲ್ಲ ; ಹೀಗಿರಲು ಪುಣ್ಯಪಾಪಗಳೆರಡನ್ನೂ ತೊರೆದ ಮೋಕ್ಷಾರ್ಥಿಗಳಿಗೆ ನಾನು ಒಡೆಯನೇ ಅಲ್ಲ.

"ಸಮಸ್ತ.ಪಾಪ" ಎನ್ನುವ ಸಮಸ್ತ ಪದದಿಂದ ಪುಣ್ಯವೂ ಗ್ರಹಿಸಲ್ಪಡುತ್ತದೆ. "ನಶೋಕೋ ನಸುಕೃತಂ ನದುಷ್ಕೃತಂ ಸರ್ವೇ ಪಾಪ್ಮಾನೋಽತೋನಿವರ್ತಂತೇ" ಎಂದು ಶ್ರುತಿಯಲ್ಲಿ "ಸರ್ವೇಪಾಪ್ಮಾನಃ" ಎಂದು ಪುಣ್ಯವೂ ಪಾಪ ಶಬ್ದದಿಂದ ಉಲ್ಲೇಖಿಸಲ್ಪಟ್ಟಿದೆ. ಮೋಕ್ಷಕ್ಕೆ ಹೋಗುವವನಿಗೆ ಪಾಪವು ಹೇಗೆ ಪ್ರತಿಬಂಧಕವೋ ಹಾಗೆಯೇ ಪುಣ್ಯವೂ ಪ್ರತಿಬಂಧಕವು. ಆದಕಾರಣ ಪ್ರತಿಬಂಧಕವೆಲ್ಲಾ ಪಾಪವೇ ಎಂದು ಹೇಳಲು ಅಭ್ಯಂತರವಿಲ್ಲ.

'ಬಂಧ' ಎಂದರೆ ಸಂಬಂಧ. ವಾಸನೆ; ಸಂಸ್ಕಾರವೆಂದರ್ಥ. ಪುಣ್ಯ ಪಾಪಗಳ ಸಂಸ್ಕಾರವೂ ಇಲ್ಲದ ಹರಿಪ್ರಪನ್ನನಿಗೆ ನಾನು ಖಂಡಿತವಾಗಿಯೂ ಪ್ರಭುವಲ್ಲ; ಮತ್ತೇನೆಂದರೆ– ಅವರಿಗೆ ನಾನು ಪರತಂತ್ರ 'ಹರಿಗುರುವಶಗೋಽಸ್ಮಿ' ಎಂದು ಹೇಳಿದೆನಲ್ಲವೆ ?

ಯಥಾಗ್ನಿಮಾಜ್ಯಸಿಕ್ತಂ–ಇದು ಹೋಮ ಮಾಡುವವರಿಗೆ ಅನುಭವವುಂಟು. ಇವರು ತಾವಾಗಿಯೇ ಇಷ್ಟಪಟ್ಟು ಅಗ್ನಿಗೆ ಅಭಿಮುಖವಾಗಿದ್ದು

ಅಗ್ನಿಗೆ ತುಪ್ಪವನ್ನು ಸುರಿದು ಜ್ವಾಲೆ ತಮ್ಮ ಕಡೆಗೆ ಹಾಯುವಾಗ ಹಬೆಗೆ ಹೆದರಿ ಹಿಂದೆ ಸರಿಯುತ್ತಾರೆ. ಹೀಗೆಯೇ ಭಗವದ್ಭಕ್ತರ ಹಬೆಯು ತಾಗೀ-ತೆಂಬ ಭಯದಿಂದಲೇ ನೀನು ದೂರ ಸರಿ ಎಂದು ತಾತ್ಪರ್ಯ || ೫ ||

ಇತಿ ಯಮ ವಚನಂ ನಿಶಮ್ಯ ಪಾಶೀ
ಯಮಪುರುಷಸ್ತಮುವಾಚ ಧರ್ಮರಾಜಂ ||
ಕಥಯ ಮಮ ವಿಭೋ ! ಸಮಸ್ತಧಾತುಃ
ಭವತಿ ಹರೇಃ ಖಲು ಯಾದೃಶೋಽಸ್ಯಭಕ್ತಃ || ೬ ||

ಪಾಶೀ–ಪಾಶಾಯುಧವನ್ನು ಧರಿಸಿರುವ, ಯಮಪುರುಷಃ–ಯಮ ಭಟನು, ಇತಿ–ಈ ರೀತಿಯಾದ, ಯಮವಚನಂ–ಯಮನ ಮಾತನ್ನು, ನಿಶಮ್ಯ–ಕೇಳಿ, ಹೇ ವಿಭೋ !–ಎಲೈ ಸ್ವಾಮಿಯೇ ! ಸಮಸ್ತಧಾತುಃ–ಸರ್ವಸ್ರಷ್ಟನಾದ, ಅಸ್ಯಹರೇಃ–ಈ ಹರಿಯ, ಭಕ್ತಃ–ಭಕ್ತನು, ಯಾದೃಶಃ–ಎಂತಹ ಲಕ್ಷಣಗಳುಳ್ಳವನಾಗಿ, ಭವತಿಖಲು–ಇರುತ್ತಿರುವನೋ ಅದನ್ನು, ಮಮ–ನನಗೆ, ಕಥಯ–ಹೇಳು, ಎಂದು, ತಂ ಧರ್ಮರಾಜಂ–ಆ ಯಮಧರ್ಮ ರಾಜನನ್ನೇ ಕುರಿತು, ಉವಾಚ–ಹೇಳಿದನು. ಹರಿಭಕ್ತರನ್ನು ಬಿಟ್ಟು ದೂರ ಸರಿಯಬೇಕಾದರೆ ಅವರ ಗುರುತುಗಳನ್ನು ಹೇಳೆಂದು ಕೇಳಿದ || ೬ ||

ಭಟನು ಹೀಗೆ ಕೇಳಲು ಯಮನು ಆ ಪ್ರಪನ್ನ ಲಕ್ಷಣಗಳನ್ನು ವಿವರಿಸುವನು.

ಯಮಃ|| ನ ಚಲತಿ ನಿಜವರ್ಣಧರ್ಮತೋ ಯಃ
ಸಮಮತಿರಾತ್ಮಸುಹೃದ್ವಿಪಕ್ಷಪಕ್ಷೇ ||
ನ ಹರತಿ ನಚ ಹಂತಿ ಕಿಂಚಿದುಚ್ಚೈಃ
ಸಿತಮನಸಂ ತಮವೇಹಿ ವಿಷ್ಣುಭಕ್ತಂ || ೭ ||

ಯಃ–ಯಾವನು, ನಿಜವರ್ಣಧರ್ಮತಃ–ತನ್ನ ವರ್ಣಾಶ್ರಮ ಧರ್ಮಗಳಿಂದ, ನಚಲತಿ–ಅಲ್ಲಾಡುವುದಿಲ್ಲವೋ, ಆತ್ಮಸುಹೃದ್ವಿಪಕ್ಷಪಕ್ಷೇ–ತನ್ನ ಸ್ನೇಹಿತ ಶತ್ರುಗಳಿಬ್ಬರಲ್ಲೂ, ಸಮಮತಿಃ–ಸ್ನೇಹಿತ–ಶತ್ರುವೆಂಬ ಭೇದಭಾವವಿಲ್ಲದೆ ಸಮಭಾವನೆಯಿಂದಿರುವನೋ, ನಹರತಿ–ಒಬ್ಬನಸ್ವತ್ತನ್ನು ಅಪಹರಿಸು-

ವುದಿಲ್ಲವೋ, ನಚಹಂತಿ ಕಿಂಚಿದುಚ್ಚೈಃ—ಯಾವ ಪ್ರಾಣಿಯನ್ನಾಗಲಿ ಆತ್ಯಂತಿಕವಾಗಿ ಹಿಂಸಿಸುವುದಿಲ್ಲವೋ, ಸಿತಮನಸಂ—ಪರಿಶುದ್ಧ ಮನಸ್ಕನಾದ ತಂ—ಅವನನ್ನು, ವಿಷ್ಣುಭಕ್ತಂ—ವಿಷ್ಣುಭಕ್ತನನ್ನಾಗಿ, ಅವೇಹಿ—ತಿಳಿ.

ವಿಷ್ಣು ಭಕ್ತನ ಮೊದಲನೆಯ ಗುರುತು (ಲಕ್ಷಣ) ತನ್ನ ವರ್ಣಾಶ್ರಮ ಧರ್ಮಗಳನ್ನು ಮೀರದಿರುವುದು; ಇದನ್ನು ಪರಾಶರರು ಮತ್ತೊಂದೆಡೆ ವಿವರಿಸಿರುವರು.

" ವರ್ಣಾಶ್ರಮಾಚಾರವತಾ ಪುರುಷೇಣ ಪರಃ ಪುಮಾನ್ ।
ವಿಷ್ಣುರಾರಾಧ್ಯತೇ ಪಂಥಾ ನಾನ್ಯಸ್ತತ್ತೋಷಕಾರಕಃ ॥ "

ವರ್ಣಾಶ್ರಮ ಧರ್ಮಗಳನ್ನನುಷ್ಠಿಸುವುದೇ ಭಗವದಾರಾಧನೆ. ಇದಕ್ಕಿಂತಲೂ ಭಗವಂತನಿಗೆ ಸಂತೋಷಕರವಾದ ಆರಾಧನೆ ಬೇರೊಂದಿಲ್ಲ. ಗೀತೆಯಲ್ಲೂ—

"ಅಹಂಹಿ ಸರ್ವಯಜ್ಞಾನಾಂ ಭೋಕ್ತಾಚ ಪ್ರಭುರೇವಚ" ಯಜ್ಞಭೋಕ್ತೃವೂ ನಾನೇ; ಸಂತುಷ್ಟನಾಗಿ ಫಲ ಕೊಡುವವನೂ ನಾನೇ" ಎಂದಿರುವನು. ಹೀಗಿರಲು ಯಾವ ಭರತಖಂಡಕ್ಕೆ ಈವರ್ಣಾಶ್ರಮ ಧರ್ಮಗಳು ಅಸಾಧಾರಣವಾಗಿವೆಯೋ; ಮತ್ತು ಅನೂಚಾನವಾಗಿ ನಡೆದು ಬಂದಿವೆಯೋ ಅಂತಹ ಭರತಖಂಡದ ಈಗಿನ ಸ್ಥಿತಿಯು ಎಷ್ಟು ಶೋಚನೀಯವಾಗಿದೆಯೆಂದು ಯೋಚಿಸಿರಿ.

ಈವರ್ಣಾಶ್ರಮ ವ್ಯವಸ್ಥೆಯು ಪರಸ್ಪರ ದ್ವೇಷಕ್ಕಾಗಲಿ ದ್ರೋಹಕ್ಕಾಗಲಿ ವಂಚನೆಗಾಗಲಿ ಅಲ್ಲ. ಪರಸ್ಪರ ಸಹಾಯಕ್ಕೋಸ್ಕರವೇ ಈ ವ್ಯವಸ್ಥೆ ಏರ್ಪಟ್ಟಿರುವುದು. ಇದನ್ನೇ ವಿವರಿಸುತ್ತದೆ; 'ಸಮಮತಿ ರಾತ್ಮಸುಹೃದ್ವಿಪಕ್ಷಪಕ್ಷೇ' ಎಂದು; 'ಆತ್ಮವತ್ಸರ್ವಭೂತಾನಿ' ಎಂಬ ನ್ಯಾಯದಂತೆ ತನ್ನ ಹಿತೈಷಿಯಾದ ಸ್ನೇಹಿತನನ್ನು ತನ್ನಂತೆಯೇ ಹೇಗೆ ನೋಡುವನೋ, ಹಾಗೆಯೇ ತನಗೆ ದ್ರೋಹ ಮಾಡುತ್ತಿರುವವನನ್ನೂ ನೋಡುವವನೀಗ ವಿಷ್ಣು ಭಕ್ತ. ಹೀಗಿರಲು ತಮ್ಮ ತಮ್ಮ ಜನ್ಮಾಂತರ ಕರ್ಮಗಳಿಗನುಸಾರವಾಗಿ ಭಗವತ್ ಸೃಷ್ಟವಾದ ಆಯಾ ಜಾತಿಗಳಲ್ಲಿ ಹುಟ್ಟಿ, ತಮ್ಮ ಜಾತಿಗಳಿಗನುಗುಣವಾದ ಧರ್ಮಾನುಷ್ಠಾನಗಳನ್ನು ಮಾಡುತ್ತಾ, ತದ್ರೂಪವಾದ ಭಗವದಾರಾಧನೆಯನ್ನು

ಮಾಡುತ್ತಾ 'ಎಲ್ಲರೂ ಭಗವಂತನ ಶರೀರವೇ' ಎಂದು ತಿಳಿದಿರುವವರಿಗೆ ಪರಸ್ಪರ ದ್ವೇಷವೆಲ್ಲಿಯದು ? ಅದರಲ್ಲೂ ತಮ್ಮ ತಮ್ಮ ಧರ್ಮದಲ್ಲೇ ನಿರತರಾಗಿರುವವರು ಪರಸ್ಪರ ದ್ವೇಷಿಸುವರೆ ?

ಇದನ್ನೇ ಪ್ರಹ್ಲಾದನೂ–

" ಸರ್ವಭೂತಾತ್ಮಕೇ ತಾತ ಜಗನ್ನಾಥೇ ಜಗನ್ಮಯೇ ।
ಪರಮಾತ್ಮನಿ ಗೋವಿಂದೇ ಮಿತ್ರಾಮಿತ್ರಕಥಾ ಕುತಃ ? ॥ "

"ಲೋಕನಾಥನಾಗಿ–ಸರ್ವಭೂತಾಂತರಾತ್ಮನಾಗಿರುವ ಪರಮಾತ್ಮನೇ ಸರ್ವತ್ರ ಈ ಜಗತ್ತಿನಲ್ಲಿ ವ್ಯಾಪಿಸಿರುವುದರಿಂದ ಜಗತ್ಸ್ವರೂಪನೆನಿಸಿಕೊಂಡಿರುವಾಗ ಶತ್ರುಮಿತ್ರರೆಂಬ ಭೇದವೆಯುದು ? " ಎಂದಿರುವನು.

ವಿಷ್ಣುಭಕ್ತನು ಯಾವನೊಬ್ಬನ ಯಾವೊಂದು ಸ್ವತ್ತನ್ನೂ ಅಪಹರಿಸುವುದಿಲ್ಲ. ಯಾವಾಗಲೂ ಎಲ್ಲಿಯೂ ಯಾವೊಂದು ಪ್ರಯೋಜನಕ್ಕಾಗಿಯೂ ಯಾವೊಂದು ವಿಧವಾದ ಹಿಂಸೆಯನ್ನೂ ಯಾವನಿಗೂ ಮಾಡುವುದಿಲ್ಲ. ಆದುದರಿಂದಲೇ, ಉಚ್ಛೈಃಸ್ಥಿತಮನಸಂ–ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬ ದೋಷಗಳೂ ಅವುಗಳ ವಾಸನೆಯೂ ಸಹ ಇಲ್ಲದೆ ಬಹಳ ಪರಿಶುದ್ಧಮನಸ್ಸುಳ್ಳವನಾಗಿರುವನು. ಶುದ್ಧ ಸತ್ವಗುಣವುಳ್ಳವನೆಂದು ತಾತ್ಪರ್ಯ. ಅವನೀಗ ವಿಷ್ಣುಭಕ್ತನೆಂದು ತಿಳಿ ॥೭॥

ಇವನೇನೋ ಶುದ್ಧ ಮನಸ್ಕನಾಗಿರಬಹುದು; ಆದರೆ ಕಲಿಯುಗದ ಮಹಿಮೆಯಿಂದ ಬಹಳ ಕ್ರೂರ ಕರ್ಮಗಳನ್ನೇಎಸಗುವ ಅನೇಕ ವಿಧ ಪಾಪಿಗಳನ್ನು ನೋಡಿದರೆ ಇವನ ಮನಸ್ಸು ಹೇಗೆ ತಾನೆ ಕದಲದಿರುವುದು ? ಎಂದರೆ ಅದಕ್ಕೆ ಯಮ ಧರ್ಮನು ಉತ್ತರಿಸುವನು.

ಕಲಿಕಲುಷಮಲೇನ ಯಸ್ಯ ನಾತ್ಮಾ
ವಿಮಲಮತೇರ್ಮಲಿನೀಕೃತಸ್ತಮೇನಂ ॥
ಮನಸಿಕೃತಜನಾರ್ದನಂ ಮನುಷ್ಯಂ
ಸತತಮವೇಹಿ ಹರೇರತೀವ ಭಕ್ತಂ ॥ ೮ ॥

ವಿಮಲಮತೇಃ–ಪರಿಶುದ್ಧ ಮನಸ್ಕನಾದ, ಯಸ್ಯ–ಯಾವನ, ಆತ್ಮಾ–ಮನಸ್ಸು, ಕಲಿಕಲುಷಮಲೇನ–ಕಲಿಮಹಿಮೆಯಿಂದ ಮಾಡುವ ಪಾಪ ರೂಪವಾದ ಕೊಳೆಯಿಂದ, ನಮಲಿನೀಕೃತಃ–ಕೊಳೆಯಾಗಿ ಮಾಡಲ್ಪಡುವುದಿಲ್ಲವೋ, ಮನಸಿ–ಮನಸ್ಸಿನಲ್ಲಿ, ಕೃತಜನಾರ್ದನಂ–ದೃಢವಾಗಿ ನಿಲ್ಲಿಸಲ್ಪಟ್ಟ ಭಗವಂತನುಳ್ಳ, ತಮೇನಂ ಮನುಷ್ಯಂ–ಅದೇ ಮನುಷ್ಯನನ್ನು, ಹರೇಃ–ವಿಷ್ಣುವಿಗೆ, ಸತತಂ–ಯಾವಾಗಲೂ, ಅತೀವ ಭಕ್ತಂ–ಅತ್ಯಂತ ಭಕ್ತನನ್ನಾಗಿ, ಅವೇಹಿ–ತಿಳಿ.

ವಿಷ್ಣು ಭಕ್ತನೋ! ಅವನ ಮನಸ್ಸು ಮತ್ತೊಬ್ಬನ ಪಾಪ ಕಾರ್ಯವನ್ನು ನೋಡಿದರೂ "ಕಲೌಕರ್ತಾರಲಿಪ್ಯತೇ" ಎಂದು ಭಾವಿಸುತ್ತಿರುವುದರಿಂದ ಸ್ವಲ್ಪವೂ ವಿಕಾರ ಹೊಂದದೆ ನಿರ್ಮಲವಾಗಿಯೇ ಇರುತ್ತದೆ. ಪತಂಜಲಿ ಮಹರ್ಷಿಯು ತಮ್ಮ ಯೋಗ ಸೂತ್ರದಲ್ಲಿ ಇದನ್ನು ವಿವರಿಸಿದಾರೆ. "ಮೈತ್ರೀ ಕರುಣಾಮುದಿತೋಪೇಕ್ಷಾಣಾಂ ಸುಖದುಃಖ ಪುಣ್ಯಾಪುಣ್ಯ ವಿಷಯಾಣಾಂ ಭಾವನಾತಃ ಚಿತ್ತ ಪ್ರಸಾದನಂ" ಎಂದು.

ಮನಸ್ಸು ಕಲಗಲೇಬೇಕಾದ ಸಂದರ್ಭದಲ್ಲೂ ಕಲಗದಿರುವುದು ಹೇಗೆ? ಎಂದರೆ ವಿವರಿಸುವನು. ಸತತಂ ಮನಸಿಕೃತಜನಾರ್ದನಂ–ಚಿಲ್ಲದ ಬೀಜವು ಕೆಸರು ನೀರನ್ನು ಹೇಗೆ ತಿಳಿಯಾಗಿಸುವುದೋ ಹಾಗೆಯೇ ಸರ್ವದಾ ಭಗವದ್ಧ್ಯಾನವು ಮನಃ ಕಾಲುಷ್ಯವನ್ನು ನೀಗಿಸಿ ನೈರ್ಮಲ್ಯವನ್ನುಂಟುಮಾಡುತ್ತೆ. ಸ್ಮೃತಿಯೂ ಕೂಡ...

"ಯಥಾಗ್ನಿರುದ್ಧತಶಿಖಃ ಕಕ್ಷಂ ದಹತಿ ಸಾನಿಲಃ |
ತಥಾಚಿತ್ತಸ್ಥಿತೋ ವಿಷ್ಣುರ್ಯೋಗಿನಾಂ ಸರ್ವಕಿಲ್ಬಿಷಂ ||"

ಎಂದು ಹೇಳಿದೆ. ಗಾಳಿ ಬೀಸಿದಾಗ ಬೆಂಕಿಯು ಹೇಗೆ ಭಗ್ಗನೆ ಹತ್ತಿಕೊಂಡು ಪೊದರುಗಳನ್ನೆಲ್ಲಾ ಸುಡುವುದೋ ಹಾಗೆಯೇ ಮನಸ್ಸಿನಲ್ಲಿರುವ ಭಗವಂತನು ಯೋಗಿಗಳ ಸರ್ವ ಪಾಪಗಳನ್ನೂ ಧ್ವಂಸ ಮಾಡುವನು; ಎಂದು ಅರ್ಥ.

ಪರಾಶರಸ್ಮೃತಿಯೂ ಹೀಗೆ ಹೇಳಿದೆ—

"ತ್ಯಜೇದ್ದೇಶಂಕೃತಯುಗೇ ತ್ರೇತಾಯಾಂಗ್ರಾಮ ಮುತ್ಸೃಜೇತ್ |
ದ್ವಾಪರೇಕುಲಮೇಕಂತು ಕರ್ತಾರಂ ತು ಕಲೌಯುಗೇ ||
ಕೃತೇ ಸಂಭಾಷಣಾದೇವ ತ್ರೇತಾಯಾಂ ಸ್ಪರ್ಶನೇನ ಚ |
ದ್ವಾಪರೇತ್ವನ್ನ ಮಾದಾಯ ಕಲೌಪತತಿ ಕರ್ಮಣಾ ||
ಜಿತೋಧರ್ಮೋಽಹ್ಯಧರ್ಮೇಣ ಸತ್ಯಂಚೈವಾನೃತೇನ ಚ |
ಜಿತಾಶ್ಚೋರೈಸ್ತು ರಾಜಾನಃ ಸ್ತ್ರೀಭಿಶ್ಚ ಪುರುಷಾಃ ಕಲೌ ||" ಎಂದು ಕಲಿಯುಗದಲ್ಲಿ ಕೆಟ್ಟ ಕೆಲಸ ಮಾಡಿದವನನ್ನು ತ್ಯಾಗಮಾಡಬೇಕು. ಕಲಿಯುಗದಲ್ಲಿ ಕೈಯಿಂದ ಕೆಲಸ ನಡೆಸಿದರೆ ಮಾತ್ರ ಪತಿತನಾಗುತ್ತಾನೆ ಎಂದಿದೆ.

ಹಾಗೆಯೇ 'ಭವಿಷ್ಯತ್ಯಧರೋತ್ತರಂ' ಮೇಲು ಕೀಳಾಗುವುದು; ಕೀಳು ಮೇಲಾಗುವುದು ಎಂದೂ ಸಾರಿದೆ.

'ಇದು ಭಗವಂತನ ಲೀಲೆ; ಅವನ ಸಂಕಲ್ಪ' ವೆಂದು ಭಾವಿಸುವವನಿಗೆ ಮನಸ್ಸಿನಲ್ಲಿ ಈಷದಪಿಕಾಲುಷ್ಯ ವುಂಟಾಗುವುದಿಲ್ಲ; ನಿರ್ಮಲವಾಗಿಯೇ ಇರುವುದೆಂದು ತಾತ್ಪರ್ಯ ||೮||

ಅತ್ಯಂತವಿಷ್ಣು ಭಕ್ತರಲ್ಲೂ ಉತ್ತಮರು ಯಾರೆಂದು ಕೇಳಲು ಅವರ ಗುರುತನ್ನು ತಿಳಿಸುವನು.

ಕನಕಮಪಿ ರಹಸ್ಯವೇಕ್ಷ್ಯಬುದ್ಧ್ಯಾ
ತೃಣಮಿವ ಯಸ್ಸಮವೈತಿ ವೈ ಪರಸ್ವಂ ||
ಭವತಿಚ ಭಗವತ್ಯನನ್ಯ ಚೇತಾಃ
ಪುರುಷವರಂ ತಮವೇಹಿ ವಿಷ್ಣುಭಕ್ತಂ ||೯||

ಯಃ–ಯಾವನು, ರಹಸಿ–ಏಕಾಂತದಲ್ಲಿ ಕಂಡ, ಕನಕಂ–ಚಿನ್ನದ ಗಟ್ಟಿಯನ್ನು, ಅವೇಕ್ಷ್ಯಾಪಿ–ನೋಡಿಯೂ ಕೂಡ, ಪರಸ್ವಂ–ಕಂಡವರ ಸ್ವತ್ತೆಂದೂ, ತೃಣಮಿವ–ಹುಲ್ಲುಕಡ್ಡಿಯಂತೆಯೂ ಕೂಡ, ಸಮವೈತಿವೈ–ತಿಳಿಯುವನೋ? ಭಗವತಿ–ಭಗವಂತನಲ್ಲಿ, ಅನನ್ಯಚೇತಾಶ್ಚ–ಅನನ್ಯಮನಸ್ಕ-

ನಾಗಿಯೂ ಕೂಡ, ಭವತಿ–ಆಗುವನೋ; ತಂ ವಿಷ್ಣುಭಕ್ತಂ–ಆ ವಿಷ್ಣು ಭಕ್ತನನ್ನು, ಪುರುಷವರಂ, ಅವೇಹಿ–ವಿಷ್ಣುಭಕ್ತರಲ್ಲೂ ಉತ್ತಮನನ್ನಾಗಿ ತಿಳಿ.

ಜನಗಳಿಲ್ಲದ ದುರ್ಗಮವಾದ ಅರಣ್ಯದಲ್ಲಿ ಬಿದ್ದಿರುವ, ಯಾರಸ್ವತ್ತೆಂದು ಊಹಿಸಲೂ ಸಾಧ್ಯವಿಲ್ಲದ ಚಿನ್ನದಗಟ್ಟಿಯನ್ನು ನೋಡಿದರೂ ಅದು ತಾನಾಗಿ ಲಭಿಸಿದ್ದಾದರೂ ಪರಸ್ವತ್ತೆಂದು ಬುದ್ಧಿ ಪೂರ್ವಕವಾಗಿ ತೊರೆದು ಕಡ್ಡಿಗಿಂತ ಕಡೆಯಾಗಿ ಕಾಣುವನೋ; ಅವನೀಗ ವಿಷ್ಣುಭಕ್ತರಲ್ಲೂ ಉತ್ತಮನು. ಅಂದರೆ—ಭಗವಂತನೇ ಉಪಾಯೋಪೇಯಗಳು; ಅವನೇ ಸರ್ವಸ್ವವೂ ಎಂದು ಸದಾ ಭಾವಿಸುತ್ತಿರುವವನಿಗೆ ಇದೆಷ್ಟರದು ? • ಇದನ್ನೇ ಆಳ್ವಾರ್ರು 'ಮಾಲ್ಪಾಲ್ ಮನಂಶುಳಿಪ್ಪ ಮಂಗೈಯರ್, ತೋಳ್ ಕೈ ವಿಟ್ಟು' ಎಂದಿದ್ದಾರೆ. 'ಸರ್ವೇಶ್ವರನಲ್ಲಿ ಮನಸ್ಸು ನೆಲೆಸಿದರೆ ವಿಷಯಾಂತರ ಗಳಲ್ಲಿ ವೈರಾಗ್ಯವು ಸ್ವತಸ್ಸಿದ್ಧವಾದುದು' ಎಂದು ತಾತ್ಪರ್ಯ. ರಸಿಕಾಗ್ರಣಿ ಅಮರುಕವಿ ವರ್ಣಿಸುತ್ತಾನೆ. –

'ಶಠಾನ್ಯಸ್ಯಾಃ ಕಾಂಚೀಮಣಿರಣಿತ ಮಾಕರ್ಣ್ಯಸಹಸಾ
ಯದಾಶ್ಲಿಷ್ಯನ್ನೇವ ಪ್ರಶಿಥಿಲ ಭುಜಗ್ರಂಥಿರಭವಃ |
ತದೇತತ್ ಕ್ವಾಚಕ್ಷೇ ಘೃತ ಮಧುಮಯತ್ವದ್ಬಹುವಚೋ-
ವಿಷೇಣಾಘೂರ್ಣಂತೀ ಕಿಮಪಿ ನಸಖೀ ಮೇಗಣಯತಿ ||' ಇತ್ಯಾದಿಗಳು,

ಈ ವಿಷಯದಲ್ಲಿ ದೃಷ್ಟಾಂತವು. ಮನಸ್ಸಿನಲ್ಲೊಂದು; ಮೇಲೊಂದು; ಇಂತಹ ನಾಯಕನೊಬ್ಬ. ನಚ್ಚಿನ ನಾಯಿಕೆಯು ಅವನಿಗೆ ಹೇಳುವ ಮಾತಿದು.

ಎಲೈಶಠನೇ ! ನನ್ನನ್ನು ಗಾಢಾಲಿಂಗನ ಮಾಡಿಕೊಳ್ಳುತ್ತಿರುವಾಗಲೇ ನಿನ್ನನ್ನು ಹುಡುಕಿಕೊಂಡು ಬರುತ್ತಿರುವ ಮತ್ತೊಬ್ಬಳ ಡಾಬಿನ ಗೆಜ್ಜೆ ಧ್ವನಿ ಯನ್ನು ನೀನು ಕೇಳಿದ ಕ್ಷಣವೇ - ಝಟ್ಟನೆ ನಿನ್ನ ತೋಳುಗಳನ್ನು ಸಡಿಲಿಸಿದೆಯಲ್ಲಾ ! ಇದನ್ನು ಯಾರಹತ್ತಿರ ಹೇಳಿಕೊಳ್ಳಲಿ? ಆಪ್ತ ಸಖಿಯಲ್ಲಿ ಹೇಳಿಕೊಳ್ಳೋಣವೆಂದರೆ ಅವಳು ನನ್ನಮಾತನ್ನು ನಂಬುವುದಿಲ್ಲ. ಏಕೆನ್ನು ವಿಯೋ? ತುಪ್ಪ-ಜೇನುಗಳಂತೆ ಸವಿಯಾದ ನಿನ್ನಬಹಳ ಬಹಳ ಮಾತುಗಳನ್ನು

ಕೇಳಿ ನಂಬಿಬಿಟ್ಟು ಮರುಳಾಗಿ ಮಂಕು ಬಡಿದಿರುವಳು. [ತುಪ್ಪ-ಜೇನು ಸಮಭಾಗವಾಗಿ ಸೇರಿದರೆ ವಿಷವಾಗುತ್ತದೆಂದು ಆಯುರ್ವೇದ ಹೇಳುತ್ತೆ] ವಿಷವನ್ನು ಸೇವಿಸಿದರೆ ಮಯಕ ಬರುವುದು ಸಹಜವಲ್ಲವೆ? ಬುದ್ಧಿ ಸ್ತಿಮಿತವಿಲ್ಲದವನು ಹೇಳಿದ ಮಾತು ಕೇಳುವನೇ? ಅಂದರೆ ನಾಯಕನ ಸವಿ ಮಾತುಗಳನ್ನು ಕೇಳಿ ಸಖಿಯು ಮರುಳಾಗಿ ಅದನ್ನೇ ನಿಜವೆಂದು ನಂಬುವಳೇ ಹೊರತು ನನ್ನ ಮಾತನ್ನು ನಂಬುವುದಿಲ್ಲ ವೆಂದು ತಾತ್ಪರ್ಯ.

ಇಲ್ಲಿ-ನಾಯಕನು ಒಬ್ಬಳನ್ನು ಆಲಂಗಿಸಿ ಆನಂದಮಗ್ನನಾಗಿದ್ದರೂ, ಗೆಜ್ಜೆಧ್ವನಿಕೇಳಿದ ಕ್ಷಣ ಇವನ ಮನಸ್ಸು. ಅವಳಿಗಿಂತ ಉತ್ತಮಳಾದ ಮತ್ತೊಬ್ಬಳಲ್ಲಿ ಓಡಿದುದರಿಂದ ಇವಳ ಮೇಲಿದ್ದ ಕೈಯೂ ಸಡಿಲವಾಯಿತು. ಇದರಂತೆಯೇ ವಿಷಯಾಂತರಗಳಿಗಿಂತ ಉತ್ತಮೋತ್ತಮವಾದ ನಿತ್ಯಾನಂದ ಮಯನಾದ ಆಭಗವಂತನಲ್ಲಿ ಮನಸ್ಸು ಸ್ಥಿರವಾದರೆ ಈ ಹೇಯವಾದ ವಿಷಯಾಂತರಗಳಲ್ಲಿ ಆಸಕ್ತಿಯು ತನ್ನಷ್ಟಕ್ಕೆ ತಾನೇ ಬಿಟ್ಟು ಹೋಗುವು ದೆಂದು ತಾತ್ಪರ್ಯ.

ಶ್ರೀವತ್ಸಚಿಹ್ನಮಿಶ್ರರೆಂಬ ನಾಮಾಂಕಿತರಾದ ಶ್ರೀಕೂರತಾಳ್ವಾ ರರು "ಕನಕಮಪಿ" ಎಂಬ ಪದ್ಯದ ಅರ್ಥವನ್ನೇ ತಮ್ಮ ಗುರುಗಳಾದ ರಾಮಾನುಜಾಚಾರ್ಯರ ವಿಷಯದಲ್ಲಿ ನಿತ್ಯಾನುಸಂಧೇಯವಾಗಿ ತಾವು ರಚಿಸಿ ರುವ 'ಯೋನಿತ್ಯಮಚ್ಯುತ' ಇತ್ಯಾದಿ ಪದ್ಯದಲ್ಲಿ ಅನುವದಿಸಿರುವರು. ಆದರೆ ಮತ್ತೊಂದು ವಿಶೇಷ. ಶ್ರೀಮನ್ನಾರಾಯಣನ ಪಾದಾರವಿಂದಗಳೆಂಬ ಚಿನ್ನದ ಗಟ್ಟಿಯಲ್ಲಿ ವ್ಯಾಮೋಹವಿರುವುದರಿಂದ ಬೇರೆಯಾದ ಚತುರ್ಮುಖ ಬ್ರಹ್ಮ ಪರ್ಯಂತವಾದ ಐಶ್ವರ್ಯಗಳನ್ನೂ, ಆತ್ಮಾನುಭವ ರೂಪ ಕೈವಲ್ಯ ವನ್ನೂ ಕೂಡ ಕಡ್ಡಿಗಿಂತಲೂ ಕಡೆಯಾಗಿ ಶ್ರೀರಾಮಾನುಜರು ಕಾಣುತ್ತಿದ್ದರು" ಎಂದು. ಚಿನ್ನವು ಉತ್ಕೃಷ್ಟವಾದ ವಸ್ತುವಾದುದರಿಂದ ಎಲ್ಲರಿಗೂ ಅದರಲ್ಲಿ ವ್ಯಾಮೋಹ ತಪ್ಪಿದ್ದಲ್ಲ; ಉತ್ತಮ ವಸ್ತು ಲಭಿಸಿದಾಗ ಕೀಳಾದ ವಸ್ತುವನ್ನು ಕಣ್ಣೆತ್ತಿಯೂ ನೋಡುವುದಿಲ್ಲವಲ್ಲವೆ? ಹೀಗೆಯೇ—

"ತೃಣೀಕೃತವಿರಿಂಚಾದಿ ನಿರಂಕುಶವಿಭೂತಯಃ ।
ರಾಮಾನುಜಪದಾಂಭೋಜಸಮಾಶ್ರಯಣ ಶಾಲಿನಃ" ।

ಶ್ರೀರಾಮಾನುಜರ ಪಾದಾಶ್ರಿತರು ಬ್ರಹ್ಮಪದವಿಯನ್ನೂ ಸಹ ಕಡ್ಡಿಗಿಂತಲೂ ಕಡೆಗಾಣುವರು ಎಂದು ಅನುಗ್ರಹಿಸಿರುವರು. ಹೀಗಿರಲು ಹೇಳುವುದೇನಿದೆ ? ॥ ೯ ॥

ಭಗವಂತನಲ್ಲಿ ಮನಸ್ಸಿಟ್ಟರೆ ಮನಃಕ್ಕಾಲುಷ್ಯಗಳೆಲ್ಲವೂ ಹೇಗೆ ತೊಲಗುವವು ? ಕಾರಣವೇನು ? ಎಂದರೆ ತೇಜಸ್ತಿಮಿರನ್ಯಾಯದಿಂದ ಒಂದೆಡೆ ನಿಲ್ಲುವುದಿಲ್ಲವೆನ್ನುವನು.

ಸ್ಫಟಿಕಗಿರಿಶಿಲಾಮಲಃ ಕ್ವವಿಷ್ಣುಃ?
ಮನಸಿ ನೃಣಾಂ ಕ್ವಚ ಮತ್ಸರಾದಿದೋಷಃ ? ॥
ನಹಿತುಹಿನಮಯೂಖ ರಶ್ಮಿಪುಂಜೇ
ಭವತಿ ಹುತಾಶನದೀಪ್ತಿಜಃ ಪ್ರತಾಪಃ ॥ ೧೦ ॥

ನೃಣಾಂ–ಮನುಷ್ಯರ, ಮನಸಿ–ಮನಸ್ಸಿನಲ್ಲಿರುವ, ಸ್ಫಟಿಕ ಗಿರಿಶಿಲಾಮಲಃ–ಸ್ಫಟಿಕದ ಬೆಟ್ಟದ ಶಿಲೆಯಂತೆ ನಿರ್ಮಲನಾದ, ವಿಷ್ಣುಃ–ಸರ್ವವ್ಯಾಪಿಯಾದ ಆ ಭಗವಂತನು ಕ್ವ?–ಎಲ್ಲಿ ?, ಮತ್ಸರಾದಿದೋಷಃ–ದ್ವೇಷಾಸೂಯಾದಿ ಕೆಟ್ಟ ಗುಣಗಳು, ಕ್ವ?–ಎಲ್ಲಿ ?, ತುಹಿನಮಯೂಖರಶ್ಮಿಪುಂಜೇ–ಚಂದ್ರಕಿರಣಗಳ ಮಧ್ಯೆ, ಹುತಾಶನ ದೀಪ್ತಿಜಃ–ಬೆಂಕಿಯ ಜ್ವಾಲೆಯಿಂದ ಉಂಟಾಗುವ, ಪ್ರತಾಪಃ–ಸುಡುವ ಶಕ್ತಿಯು, ನಹಿಭವತಿ–ಉಂಟಾಗುವುದಿಲ್ಲವಲ್ಲವೆ ?

ಆಗತಾನೆ ಒಡೆದ ಸ್ಫಟಿಕದ ಬೆಟ್ಟದ ಶಿಲಾಖಂಡವು ಎಷ್ಟು ಸ್ವಚ್ಛವಾಗಿಯೂ, ಬೆಳ್ಳಗೂ ಇರುವುದೋ ಅದರಂತೆ ನಿತ್ಯನಿರ್ಮಲನಾದ ಭಗವಂತನೆಲ್ಲಿ ? ಅಂಧಕಾರದಂತೆ ತತ್ವಜ್ಞಾನವನ್ನು ಮರೆಸುವ, ಪಾಪ ಸಂಪಾದನೆಗಾಗಿಯೇ ಇರುವ ಮತ್ತು ಪಾಪದಿಂದಲೇ ಉಂಟಾಗುವ ಮಾತ್ಸರ್ಯಾದಿ ದೋಷಗಳೆಲ್ಲಿ? (ಮಾತ್ಸರ್ಯ–ಮತ್ತೊಬ್ಬರ ಶುಭವನ್ನು ಸಹಿಸದಿರುವಿಕೆ) ಅಂದರೆ – ಮನುಷ್ಯರ ಮನಸ್ಸೆಂಬ ಒಂದೇ ಅಧಿಕರಣದಲ್ಲಿ ನಿರ್ಮಲನಾದ ಭಗವಂತನೂ, ಮಾತ್ಸರ್ಯಾದಿ ದೋಷಗಳೂ ಹೇಗೆ ತಾನೆ ಒಟ್ಟಿಗೆ ಇರಲು ಸಾಧ್ಯವೆಂದು ತಾತ್ಪರ್ಯ. ದೀಪವಿರುವ ಜಾಗದಲ್ಲಿ ಕತ್ತಲೆಕವಿಯುವುದೆ?

ಇದನ್ನು ಉದಾಹರಣೆ ಮೂಲಕ ದೃಢೀಕರಿಸುತ್ತಾನೆ. 'ನಹಿತುಹಿನ' ಇತ್ಯಾದಿ. ಹಿಮಮಯವಾದ ಕಿರಣ ಚಂದ್ರನದು. ಆ ಕಿರಣ ಬಿದ್ದ ಜಾಗವೆಲ್ಲವೂ ತಣ್ಣಗಾಗುವುವು. ಹೀಗಿರಲು ಚಂದ್ರಕಿರಣವೇ ಹೇಗಿರಬಹುದು ? ನೀರಿನಂತೆ ಬೆಂಕಿಯನ್ನೇ ಆರಿಸುವಶಕ್ತಿ ಅದಕ್ಕಿರುವಾಗ ಆ ಕಿರಣಗಳೊಳಗೆ ಬೆಂಕಿ ಇರಲು ಸಾಧ್ಯವೇ ? ಅಥವಾ ಬೆಂಕಿಗೆ ಸ್ವಾಭಾವಿಕವಾದ ದಹನಶಕ್ತಿಯು ಚಂದ್ರನ ಕಿರಣಗಳಿಗೆ ಬರಲುಸಾಧ್ಯವೇ ? ಈ ಅನುಭವವನ್ನು ಬದರಿನಾಥ ಮತ್ತು ಮುಕ್ತಿನಾಥ ಯಾತ್ರೆಗಳನ್ನು ಮಾಡುವವರು ಪಡೆಯುವರು.

ಅಂತೂ - ಭಗವಂತನನ್ನಾಶ್ರಯಿಸದೇ ಇರುವವರಲ್ಲೀಗ ಈ ದೋಷಗಳಿರುವುವು. ಅಂದರೆ—ಯಾರು ಭಗವಂತನನ್ನು ಧ್ಯಾನಮಾಡಿ ಮನಸ್ಸಿನಲ್ಲಿ ನೆಲೆಗೊಳಿಸಿರುವರೋ ಅವರಲ್ಲಿ ಈ ದೋಷಗಳಿರುವುದಿಲ್ಲ. ಭಗವತ್ ಧ್ಯಾನವಿಲ್ಲದವರ ಮನಸ್ಸಿನಲ್ಲೀಗ ಈ ದೋಷಗಳು ತುಂಬಿರುವುವು.

ಇದನ್ನೇ ನಮ್ಮಾಳ್ವಾರ್ರವರು "ಇಂಗಿಲ್ಲೈ" ಇತ್ಯಾದಿ ಪದ್ಯದಲ್ಲಿ ಅನುಗ್ರಹಿಸಿರುವರು. "ಎಲ್ಲೈಪಾಪಗಳೇ ! ಈಗ ಹಿಂದಿನಂತಿಲ್ಲ; ನಿಮ್ಮ ಪ್ರತಾಪ ನಡೆಯಲಾರದು; ಏಕೆನ್ನುವಿರೋ ? ನಮ್ಮ ಶ್ರಿಯಃಪತಿ – ಆ ಪುಂಡರೀಕಾಕ್ಷ-ಅವನೂ ಅವನ ಕಲ್ಯಾಣಗುಣಗಳೂ ನನ್ನ ಮನಸ್ಸಿನಲ್ಲಿ ನೆಲೆಸಿಂತಿರುವರು. ನಿಮಗೆ ಜಾಗವೆಲ್ಲಿಯದು ? ಸ್ಥಳವಿಲ್ಲ" ಎಂದರು. ಅದಕ್ಕೆ ಪಾಪಗಳು – 'ಪರವಾಗಿಲ್ಲ; ಅದೆಲ್ಲಾ ಇರಲಿ, ನಾವೂ ಒಂದು ಮೂಲೆಯಲ್ಲಡಗಿ ಕುಳಿತಿರುವೆವು.' ಎಂದವು. ಇಗೋ! ನೀವು ದೊಡ್ಡಮನುಷ್ಯರು; ಹೀಗೆಲ್ಲಾ ನೀವು ಮೈ ಹುದುಗಿಸಿಕೊಂಡು ಕಷ್ಟಪಡುವುದಕ್ಕಿಂತ, ಪುನಃ ಹಿಂದುಗಡೆ ಗಮನವಿಲ್ಲದಂತೆ ಇಲ್ಲಿಂದ ಕಾಲ್ತೆಗೆಯುವುದೇ ಲೇಸು ಎಂದಿದಾರೆ— ಮತ್ತೂ "ವಾನೋಮರಿಕಡಲೋ" ಎಂಬ ಪದ್ಯವನ್ನೂ ಅನುಗ್ರಹಿಸಿರುವರು.

"ಧೇನುಕಾಸುರ ಸಂಹಾರ ಮಾಡಿದವನ ಅಂದರೆ ಆಶ್ರಿತರ ಪ್ರತಿಬಂಧಕಗಳನ್ನು ನೀಗಿಸುವವನ ದಿವ್ಯ ಚರಣಾರವಿಂದವನ್ನು ಧ್ಯಾನಿಸಿದೆ ; ಆ ನನ್ನ ಬಲಿಷ್ಠವಾದ ಪಾಪಗಳೆಲ್ಲವೂ ಆಕಾಶದಲ್ಲಿ ಲೀನವಾದುವೋ ! ಸಮುದ್ರದಲ್ಲಿ ಕರಗಿದುವೋ !! ಗಾಳಿಯಲ್ಲಿ ತೂರಿಹೋದುವೋ !!! ಬೆಂಕಿಯಲ್ಲಿ ಬೆಂದು ಭಸ್ಮವಾದುವೋ !!!! ಮಹಾಪ್ರಸ್ಥಾನ ಹೋದುವೋ !!!!! ಹೇಗೆ ಹೋದು

ವೆಂಬುದನ್ನೇ ನಾನರಿಯೆ ; ಆಶ್ಚರ್ಯ" ಎಂದಿದಾರೆ. ಅಂದರೆ ಭಗವಂತ ನನ್ನು ನೆನೆದರೆ ಸಾಕು ; ಪಾಪಗಳು ಧ್ವಂಸವಾಗುವುವು–ಎಂದು ತಾತ್ಪರ್ಯ ‖ ೧೦ ‖

"ವಿಷ್ಣುವನ್ನು ಮನದಲ್ಲಿ ನೆನೆದರೆ ಸಾಕು ; ಮಾತ್ಸರ್ಯಾದಿ ದೋಷ ಗಳು ತೊಲಗುವುವು" ಎಂದು ಹೇಳಿದಿರಿ. ಎಂತಹವನ ಮನದಲ್ಲಿ ಭಗವಂತನು ವಾಸಿಸುವನೆಂದು ಹೇಗೆ ತಿಳಿಯಲಿ ? ಎಂದು ಕೇಳಿದ. ಅದಕ್ಕೆ ಉತ್ತರ ಕೊಡುವನು.

ವಿಮಲಮತಿರಮತ್ಸರಃ ಪ್ರಶಾಂತಃ
ಶುಚಿಚರಿತೋಽಖಿಲಸತ್ತ್ವಮಿತ್ರಭೂತಃ ‖
ಪ್ರಿಯಹಿತವಚನೋಽಸ್ತಮಾನಮಾಯೋ
ವಸತಿ ಸದಾ ಹೃದಿತಸ್ಯ ವಾಸುದೇವಃ ‖ ೧೧ ‖

ವಿಮಲಮತಿಃ–ಪರರ ದೋಷವನ್ನು ನೋಡಿ ಮನಸು ಕಲುಷಿತವಾಗ ದವ, ಅಮತ್ಸರಃ–ಪರರ ಶುಭವನ್ನು ಕಂಡು ಕರುಬುವುದೇ ಮೊದಲಾದ ಅರಿಷಡ್ವರ್ಗವಿಲ್ಲದವ, ಪ್ರಶಾಂತಃ–ಬಾಹ್ಯಾಂತರಿಂದ್ರಿಯಗಳನ್ನು ಜಯಿಸಿ ದವ, ಇದರಿಂದ ಮನಸ್ಸಿನ ಶುದ್ಧಿ ಹೇಳಿದಂತಾಯಿತು, ಶುಚಿಚರಿತಃ–ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಸದಾಚಾರ ಸಂಪನ್ನನು, ಅಖಿಲಸತ್ತ್ವಮಿತ್ರ ಭೂತಃ–ಸಕಲ ಪ್ರಾಣಿಗಳಿಗೂ ಅನುಕೂಲ ಮಾಡುವುದರಲ್ಲೇ ನಿರತನು; ಇದರಿಂದ ಕಾಯಿಕ ಶುದ್ಧಿಯು ಹೇಳಲ್ಪಟ್ಟಿತು. ಪ್ರಿಯಹಿತವಚನಃ–ಪ್ರಿಯ ವಚನವೆಂದರೆ-ಒಳಿತೋ ಕೆಟ್ಟುದೋ ಕೇಳುವವನಿಗೆ ತತ್ಕ್ಷಣ ಇಷ್ಟವಾದ ಮಾತು; ಹಿತವಚನವೆಂದರೆ-ಕೇಳುವವನಿಗೆ ತತ್ಕ್ಷಣ ವಿರೋಧವಾಗಿ ಕಂಡರೂ ಮುಂದಕ್ಕೆ ಒಳಿತಾಗುವ ಮಾತು ; ಲೋಕದಲ್ಲಿ ಪ್ರಿಯವಾದ ಮಾತು ಹಿತ ವಾಗುವುದಿಲ್ಲ ; ಹಿತವಾದುದು ಪ್ರಿಯವಾಗಲಾರದು ; ಯಾವನ ಮಾತು ಈ ಎರಡೂ ಆಗಿರುವುದೋ ಅವನು ಪ್ರಿಯಹಿತವಚನನು ; ಇದರಿಂದ ವಾಕ್ ಶುದ್ಧಿಯೂ ಹೇಳಿದಂತಾಯಿತು ; ಈ ರೀತಿ ತ್ರಿಕರಣ ಶುದ್ಧಿಗೆ ಪ್ರಯೋಜನ ವೇನೆಂದರೆ ಅಸ್ತಮಾನ ಮಾಯಃ–ಮಾನ, ಮಾಯೆ ಇಲ್ಲದವನು ; ತ್ರಿಕರಣ

ಶುದ್ಧಿ ನನಗಿದೆ ಎಂಬ ಗರ್ವವಿಲ್ಲದವನು. ತ್ರಿಕರಣ ಶುದ್ಧನಿವನು ಎಂಬ ಖ್ಯಾತಿ, ಲಾಭ ಪೂಜೆಗಳಿಂದ ಪರರನ್ನು ಮೋಸಗೊಳಿಸದವನು. ಇಂತಹವನ ಮನದಲ್ಲಿ ವಾಸುದೇವನು ಸದಾ ವಾಸಮಾಡುವನು. ಇಂತಹ ಗುಣ-ಪೂರ್ಣನ ಹೃದಯದಲ್ಲಿ ವಾಸ ಮಾಡುವುದರಿಂದ ವಾಸುದೇವನೆಂಬ ಹೆಸರು ಸಾರ್ಥಕವಾಯಿತೆಂದು ಭಗವಂತನು ಭಾವಿಸುತ್ತಾನೆಂದು ತಾತ್ಪರ್ಯ.

"ಸರ್ವತ್ರವಸತೀತಿವಾಸುಃ ವಾಸುಶ್ಚಾ ಸೌದೇವಶ್ಚ" ಎಂಬ ವ್ಯುತ್ಪತ್ತಿಯಿಂದ ಎಲ್ಲಾ ಚೇತನಾಚೇತನಗಳೂ ಭಗವಂತನಿಗೆ ಶರೀರವಾದುದರಿಂದ ಅದಕ್ಕೆಲ್ಲಾ ಅಂತರ್ಯಾಮಿಯಾಗಿದ್ದೂ ಅವುಗಳ ದೋಷ ಸಂಸ್ಪರ್ಶವಿಲ್ಲದೆ ಪ್ರಕಾಶಿಸುವವನೆಂದರ್ಥ. ದಿವು ಧಾತುವಿಗೆ ಕಾಂತಿಯೂ ಅರ್ಥ ॥ ೧೧ ॥

ಕಿಂಕರನು ಕೇಳುತ್ತಾನೆ; ಸ್ವಾಮಿ! ಭಗವಂತನು "ನಚಕ್ಷುಷಾ ಗೃಹ್ಯತೇ ನಾಪಿವಾಚಾ" ಇತ್ಯಾದಿ ಕ್ರಮದಿಂದ ಕಣ್ಣಿಗೆ ಕಾಣಿಸುವವನಲ್ಲ; ಜನರ ಮನದಲ್ಲಿರುವ ಗುಣದೋಷಗಳು ಅವನವನ ನಡೆನುಡಿಗಳಿಂದ ಗೊತ್ತಾಗಬೇಕು. ಹೀಗಿರಲು ನೋಡಿದಾಕ್ಷಣವೇ ಇವರು ವೈಷ್ಣವರೆಂದು ಹೇಗೆ ತಿಳಿದೀತು? ಎಂದು. ಅದಕ್ಕೆ ಯಮನು ಉತ್ತರಿಸುವನು.

ವಸತಿಹೃದಿ ಸನಾತನೇಚ ತಸ್ಮಿನ್
ಭವತಿ ಪುಮಾನ್ ಜಗತೋಽಸ್ಯ ಸೌಮ್ಯರೂಪಃ
ಕ್ಷಿತಿರಸಮತಿರಮ್ಯಮಾತ್ಮನೋಽಂತಃ
ಕಥಯತಿ ಚಾರುತಯೈವ ಸಾಲಪೋತಃ ॥ ೧೨ ॥

ಮತ್ತಿಮರವು ಸೊಸಿಯಲ್ಲೇ ದುಂಡಾಗಿ ಎಸಳಾಗಿ ಗಂಟಿಲ್ಲದೆ ಉದ್ದವಾಗಿದ್ದು ತನ್ನ ಬೇಗಿನ ಮೂಲಕ ಭೂಮಿಯ ಸಾರವನ್ನು ಸೂಚಿಸುವಂತೆ "ರೂಪಮೇವಾಸ್ಯೈ ತನ್ಮಹಿ ಮಾನಂ ವ್ಯಾಚಷ್ಟೇ" ಎಂಬ ರೀತಿ ವೈಷ್ಣವರ ಮುಖದರ್ಶನ ಮಾಡಿದಾಗಲೇ ತೋರಿ ಬರುವ ಅವರ ಸೌಮ್ಯತೆಯೇ ಒಳಗಿರುವ ಭಗವಂತನನ್ನು ತೋರಿಸಿ ಕೊಡುತ್ತದೆ. ಇದನ್ನೇ ಉಪನಿಷತ್ತು 'ಬ್ರಹ್ಮವಿದ ಇವಸೌಮ್ಯ!ತೇ ಮುಖಂಭಾತಿ', 'ಸೌಮ್ಯತೆಯು ಬ್ರಹ್ಮವಿತ್ತಿನ ಲಕ್ಷಣ' ವೆಂದು ಸಾರಿದೆ. ಈ ವಿಷಯವನ್ನು ನಾಸ್ತಿಕರೂ ಕೂಡ ಅನುಭವಿಸಿ ಕಾಣುತ್ತಿರುವರು ॥ ೧೨ ॥

ಹೃದಿ ಯದಿ ಭಗವಾನನಾದಿರಾಸ್ತೇ
ಹರಿರಸಿ ಶಂಖಗದಾಧರೋಽವ್ಯಯಾತ್ಮಾ ||
ತದಘಮಘವಿಘಾತಕರ್ತೃಭಿನ್ನಂ
ಭವತಿ ಕಥಂ ಸತಿಚಾಂಧಕಾರಮರ್ಕೇ || ೧೩ ||

ಯಾವನಲ್ಲಿ ಈ ರೀತಿ ಭಗವತ್ಸಾನ್ನಿಧ್ಯವಿರುವುದೋ ಅವನಲ್ಲಿ ಕಿಂಚಿತ್ತು ಪಾಪವೂ ಇರುವುದಿಲ್ಲ. ಸರ್ವ ಪಾಪನಿವರ್ತಕನಾದ ಭಗವಂತನು ತನ್ನ ಪಂಚಾಯುಧಗಳಿಂದ ಆಶ್ರಿತನ ಪಾಪಗಳನ್ನೆಲ್ಲಾ ಧ್ವಂಸ ಮಾಡುವನು. ಸೂರ್ಯೋದಯವಾದರೆ ಅವನ ಕಿರಣಗಳಿಂದ ಕತ್ತಲೆಯು ಧ್ವಂಸವಾಗುವುದಲ್ಲವೆ ? || ೧೩ || ಮತ್ತೂ—

ಯಮನಿಯಮವಿಧೂತಕಲ್ಮಷಾಣಾಂ
ಅನುದಿನಮಚ್ಯುತ ಸಕ್ತಮಾನಸಾನಾಂ |
ಅಪಗತಮದಮಾನಮತ್ಸರಾಣಾಂ
ವ್ರಜ ಭಟ ! ದೂರತರೇಣ ಮಾನವಾನಾಂ ||೧೪||

‘ಅಹಿಂಸಾ ಸತ್ಯಾಸ್ತೇಯಬ್ರಹ್ಮಚರ್ಯಾಪರಿಗ್ರಹಾಯಮಾಃ | ಶೌಚಸಂತೋಷ ತಪಸ್ಸ್ವಾಧ್ಯಾಯೇಶ್ವರ ಪ್ರಣಿಧಾನಾನಿ ನಿಯಮಾಃ’ ಈ ಯಮ ನಿಯಮಗಳನ್ನು ಅನುಷ್ಠಿಸಿ ಮನಃ ಕಾಲುಷ್ಯವನ್ನು ತೊಳೆದುಕೊಂಡು ಆಶ್ರಿತ ರಕ್ಷಣ ದೀಕ್ಷನಾದ ಶ್ರೀಮನ್ನಾರಾಯಣನನ್ನು ಸರ್ವದಾ ಮನದಲ್ಲಿ ನೆನೆಯುತ್ತಾ, ವಿದ್ಯಾಮದ, ಧನಮದ, ಸತ್ಕುಲ ಪ್ರಸೂತಿಮದಗಳಿಲ್ಲದೆ, ಅಹಂಕಾರ ಮಮಕಾರಗಳಿಲ್ಲದೆ, ಮಾತ್ಸರ್ಯಾದಿಗಳಿಲ್ಲದಿರುವ ಮನುಷ್ಯರನ್ನು ಕಂಡರೆ ದೂರ ಸರಿದು ಹೋಗು ; ಹತ್ತಿರಕ್ಕೆ ಹೋಗಬೇಡ. || ೧೪ ||

ಯಮಧರ್ಮರಾಯನು ಯಾರನ್ನು ಕಂಡರೆ ದೂರ ಸರಿಯಬೇಕೋ ಅಂತಹ ವೈಷ್ಣವರ ಲಕ್ಷಣಗಳನ್ನು ಹೇಳಿ ಭಟನು ಕರೆತರಲು ಯೋಗ್ಯರಾದ ಭಗವತ್ಸಾನ್ನಿಧ್ಯವಿಲ್ಲದ ಪಾಪಿಗಳ ಲಕ್ಷಣವನ್ನು ಅಂದರೆ ಗುರುತನ್ನು ನಾಲ್ಕು ಶ್ಲೋಕಗಳಿಂದ ಸ್ಪಷ್ಟವಾಗಿ ನಿರೂಪಿಸುವನು.

ಹರತಿ ಪರಧನಂ ನಿಹನ್ತಿ ಜನ್ತೂನ್
ವದತಿ ತಥಾನೃತನಿಷ್ಠುರಾಣಿ ಯಶ್ಚ ।
ಅಶುಭಜನಿತದುರ್ಮದಸ್ಯ ಪುಂಸಃ
ಕಲುಷಮತೇರ್ಹೃದಿ ತಸ್ಯ ನಾಸ್ತ್ಯನಂತಃ ॥ ೧೫ ॥

ಯಾವನು ಪರರ ಧನವನ್ನು ಕಳ್ಳತನದಿಂದಾಗಲಿ, ಮೋಸದಿಂದಾಗಲೀ, ಅಪಹರಿಸುವನೋ, ಪ್ರಾಣಿಹಿಂಸೆ ಮಾಡುವನೋ, ಸುಳ್ಳಾಡುವನೋ, ಇತರರಿಗೆ ಮರ್ಮ ಭೇದಕವಾದ ಮಾತನ್ನಾಡುವನೋ, ಪಾಪ ಕೆಲಸವನ್ನು ಮಾಡಿ ಅದರಿಂದಲೇ ಹೆಮ್ಮೆ ಪಡುವನೋ, ಕಾಮ, ಕ್ರೋಧ, ಲೋಭ ಮೋಹ ಮದ ಮತ್ತು ಮಾತ್ಸರ್ಯಗಳೆಂಬ ಅರಿಷಡ್ವರ್ಗದಿಂದ ತುಂಬಿದ ಮನವುಳ್ಳವನೋ ಅವನ ಹೃದಯದಲ್ಲಿ ಸರ್ವಾಂತರ್ಯಾಮಿಯಾದ ವಿಷ್ಣುವೂ ಕೂಡ ಇರುವುದಿಲ್ಲ. ಹಾಗೆಂದ ಮಾತ್ರಕ್ಕೆ ವಿಷ್ಣುವಿನ ಸರ್ವಾಂತರ್ಯಾಮಿತ್ವಕ್ಕೆ ಲೋಪವಿಲ್ಲ. ಮುಳ್ಳಿನ ಮೇಲಿರುವಂತೆ ಕಷ್ಟದಿಂದಿರುವನೆಂದು ತಾತ್ಪರ್ಯ ॥ ೧೫ ॥

ನಸಹತಿ ಪರಸಂಪದಂ ವಿನಿಂದಾಂ
ಕಲುಷ ಮತಿಃ ಕುರುತೇ ಸತಾಮಸಾಧುಃ॥
ನಯಜತಿ ನದದಾತಿ ಯಶ್ಚಸಂತಂ
ಮನಸಿ ನ ತಸ್ಯ ಜನಾರ್ದನೋಽಧಮಸ್ಯ ॥೧೬॥

ಯಾವನು ಪರರ ಐಶ್ವರ್ಯವನ್ನು ನೋಡಿ ಸಹಿಸುವುದಿಲ್ಲವೋ – ತಾನುದುರ್ಗುಣತುಂಬಿದ್ದು ಕೆಟ್ಟ ಕೆಲಸಗಳನ್ನೇ ಮಾಡುತ್ತಿದ್ದರೂ ಸತ್ಪುರುಷರನ್ನೇ ನಿಂದಿಸುವನೋ – ಭಗವದಾರಾಧನೆ ಮಾಡುವುದಿಲ್ಲವೋ ದೇಶಕಾಲಗಳನ್ನೂ ಪಾತ್ರವನ್ನೂ ನೋಡಿ ದಾನ ಮಾಡುವುದಿಲ್ಲವೋ–ಅಂತಹವನ, ಮನಸ್ಸಿನಲ್ಲಿ "ತಾನಾಗಿ ಬಂದು ಒಂದಿಷ್ಟು ಜಾಗಕೊಡು" ಎಂದು ಕೇಳಿ ಕೊಂಡು ನೆಲೆಸುವ ಸ್ವಭಾವವುಳ್ಳ ಭಗವಂತನೂ ಕೂಡ ವಾಸಮಾಡುವುದಿಲ್ಲ ॥೧೬॥

ಪರಮಸುಹೃದಿ ಬಾಂಧವೇ ಕಳತ್ರೇ
ಸುತತನಯಾಪಿತೃಮಾತೃಭೃತ್ಯವರ್ಗೇ ||
ಶಠಮತಿರುಪಯಾತಿ ಯೋಽರ್ಥತೃಷ್ಣಾಂ
ತಮಧಮಚೇಷ್ಟಮವೇಹಿ ನಾಸ್ಯಭಕ್ತಂ ||೧೭||

ಯಾವನು ತನಗೆ ಶುಭವನ್ನು ಕೋರುವ ಮಿತ್ರನಲ್ಲೂ— "ಶರೀರ ಸಂಬಂಧವನ್ನು ಮುಂದಿಟ್ಟು ಹಿತವನ್ನು ಕೋರುವ ಬಂಧುವಿನಲ್ಲೂ – ಇವನೇ ತನಗೆ ಗತಿ ಯೆಂದಿರುವ ಹೆಂಡತಿಯಲ್ಲೂ – ತಾನೇ ನಿಂತು ಕಾಪಾಡಬೇಕಾದ ಮಗ, ಮಗಳು, ತಾಯಿ, ತಂದೆ, ಆಳುಗಳು ಮುಂತಾದ ಪೋಷ್ಯ ವರ್ಗದಲ್ಲೂ-ಹಣದ ದುರಾಸೆಯಿಂದ ಅಂತರಂಗ ದ್ರೋಹವನ್ನೇ ಎಸಗುವನೋ ಅಂತಹ ಅಧಮಾಧಮ ಕೃತ್ಯವುಳ್ಳವನಲ್ಲಿ ಪರಮ ಪುರುಷನಾದ ಭಗವಂತನು ವಾಸಮಾಡುವುದಿಲ್ಲ. ಇಂತವನನ್ನು ಭಗವದ್ಭಕ್ತನಲ್ಲ ವೆಂದು ತಿಳಿ ||೧೭||

ಅಶುಭಮತಿರಸತ್ಪ್ರವೃತ್ತಿಸಕ್ತಃ
ಸತತಮನಾರ್ಯ ವಿಶಾಲ ಸಂಗಮತ್ತಃ |
ಅನುದಿನ ಕೃತಪಾಪಬಂಧಸಕ್ತಃ
ಪುರುಷಪಶುರ್ನಹಿ ವಾಸುದೇವ ಭಕ್ತಃ ||೧೮||

ಅಶುಭಮತಿಃ – ಯಾವನುಮನಸ್ಸಿನಲ್ಲಿ ಲೋಕಶಾಸ್ತ್ರವಿರುದ್ಧವಾದ ಕೆಲಸಗಳನ್ನು ಯೋಚಿಸುವನೋ, ಅಸತ್ಪ್ರವೃತ್ತಿಸಕ್ತಃ–ಅಂತಹ ಕೆಟ್ಟ ಕೆಲಸವನ್ನೇ ಮಾಡುವನೋ, ಸತತ ಮನಾರ್ಯ ವಿಶಾಲ ಸಂಗಮತ್ತಃ–ಸರ್ವದಾ ದುರ್ಜನರ ಸಹವಾಸದಿಂದ ಕೃತ್ಯಾಕೃತ್ಯಗಳನ್ನರಿಯದೆ ಆ ಸಹವಾಸದಿಂದಲೇ ಮದಿಸಿರುವನೋ ಅನುದಿನಕೃತ ಪಾಪಬಂಧಸಕ್ತಃ-ಬುದ್ಧಿ ಪೂರ್ವಕವಾಗಿಯೇ ಪ್ರತಿನಿತ್ಯವೂ ಪಾಪ ಕಾರ್ಯಗಳನ್ನೇ ಮಾಡುತ್ತಿರುವನೋ, ಪುರುಷಪಶುಃ– ಅವನು ಪಶುವೇ ಸರಿ-ಆಕಾರ ಮಾತ್ರ ಮನುಷ್ಯನದು; ಅಷ್ಟೆ! 'ವೃತ್ತ್ಯಾ ಪಶುರ್ನರವಪುಃ' ಮನುಷ್ಯನ ಆಕಾರ; ಪಶುವಿನ ನಡತೆಯಿರುವವನೆಂದು ಶ್ರೀಮಣವಾಳ ಮಾಮುನಿಗಳವರು ಅಪ್ಪಣೆ ಕೊಡಿಸಿದಾರೆ. ಅಂದರೆ ಆಹಾರ' ನಿದ್ರೆ, ಭಯ, ಮೈಥುನಗಳೆಂಬ ಪಶು ಮನುಷ್ಯರಿಬ್ಬರಿಗೂ ಸಮಾನವಾದ

ಧರ್ಮ ಮಾತ್ರವಿದೆ. ಮನುಷ್ಯನಿಗೇ ವಿಶೇಷವಾದ ತಪ್ಪು ಸರಿಯೆಂಬ ಜ್ಞಾನ—ಪರಲೋಕ ಸೌಖ್ಯವೊಂದುಂಟೆಂಬ ಜ್ಞಾನವಿಲ್ಲದ ಕಾರಣ ಪಶುವಿಗೆ ಸಮಾನನಾದವನೆಂಧು ತಾತ್ಪರ್ಯ; ಅಯ್ಯೋ ! ದುರ್ಲಭವಾದ ಮನುಷ್ಯ ಜನ್ಮವನ್ನು ಪಡೆದೂ ಕರ್ತವ್ಯವನ್ನು ತೊರೆದಿರುವರಲ್ಲಾ !! ಎಂದು ಯಮನೂ ಅನುತಾಪಪಡುವನು; 'ನಹಿವಾಸುದೇವಭಕ್ತಃ—ಇಂತಹವನು ಭಗವದ್ಭಕ್ತನಲ್ಲ' ಅವನ ಮೇಲೀಗ ನಿನ್ನ ಅಧಿಕಾರವೆಂದು ತಾತ್ಪರ್ಯ.

ಈ ರೀತಿ ಭಗವದ್ಭಕ್ತರಲ್ಲದವರ ಲಕ್ಷಣವನ್ನು ಹೇಳಿ ಪುನಶ್ಚಭಕ್ತರ ಸಾಶತರ್ಗ್ಯಸಾರತಮವಾದ ಲಕ್ಷಣಗಳನ್ನು ಎರಡು ಶ್ಲೋಕಗಳಿಂದ ನಿರೂಪಿಸುವನು.

ಸಕಲಮಿದ ಮಹಂಚ ವಾಸುದೇವಃ
ಪರಮಪುಮಾ೯ ಪರಮೇಶ್ವರಸ್ಸ ಏಕಃ ||
ಇತಿಮತಿರಚಲಾ ಭವತ್ಯನಂತೇ
ಹೃದಯಗತೇ ವ್ರಜತಾ೯ ವಿಹಾಯದೂರಾತ್ ||೧೪||

ಇದಂ—ಈ ಕಣ್ಣೆದುರಿಗೆ ಕಾಣುತ್ತಿರುವ ಹೆಸರು-ಆಕಾರಗಳನ್ನೊಳಗೊಂಡ ಚೇತನಾಚೇತನಾತ್ಮಕವಾದ ಈ ಜಗತ್ತು, ಸಕಲಂ—ಕಲಾ ಎಂದರೆ ಸೂಕ್ಷ್ಮಾಂಶ ಸೂಕ್ಷ್ಮಾಂಶದಿಂದೊಡಗೂಡಿದ,ಅಂದರೆ ಹೆಸರು ಆಕಾರಗಳನ್ನು ನಿರೂಪಿಸಲಾಗದ ಸೂಕ್ಷ್ಮಭೂತವಾದ ಈ ಜಗತ್ತು ಕೂಡ, ವಾಸುದೇವಃ—ಭಗವಂತನೇ ದೇವಃ—ಪ್ರಕಾಶಿಸುವವನೆಂದರ್ಥ, ವಾಸುಃ-ಎಂದರೆ ಎಲ್ಲೆಡೆಯಲ್ಲೂ ವಾಸಿಸುವವನೆಂದರ್ಥ, ತನಗೆ ಶರೀರ ಭೂತವಾದ ಸ್ಥೂಲ ಸೂಕ್ಷ್ಮರೂಪವಾದ ಈ ಚೇತನಾಚೇತನಗಳೆಲ್ಲದರಲ್ಲೂ ಅಂತರ್ಯಾಮಿಯಾಗಿದ್ದರೂ ಅವುಗಳ ದೋಷ ಸಂಬಂಧವಿಲ್ಲದಂತೆ ಪ್ರಕಾಶಿಸುವವನೆಂದು ತಾತ್ಪರ್ಯ. ಇದನ್ನೇ ಶ್ರುತಿಯೂ 'ಸರ್ವಂ ಖಲ್ವಿದಂ ಬ್ರಹ್ಮ' ಈ ಸ್ಥೂಲ ಸೂಕ್ಷ್ಮರೂಪವಾದ ಚೇತನಾಚೇತನಾತ್ಮಕವಾದ ಜಗತ್ತೆಲ್ಲಾ ಬ್ರಹ್ಮವೇ' ಎಂದುಸಾರಿದೆ.

ಈ ಸಾಮಾನಾಧಿಕರಣ್ಯವು ಶರೀರಾತ್ಮಭಾವ ಸಂಬಂಧದಿಂದ ವ್ಯವಹರಿಸಲ್ಪಡತಕ್ಕದು; ಐಕ್ಯದಿಂದಲ್ಲ. ಸಾಮಾನಾಧಿಕರಣ್ಯವೆಂದರೆ ಏಕಾಧಿಕರಣವೃತ್ತಿತ್ವ; ಒಂದೇ ಅಧಿಕರಣದಲ್ಲಿ ಎರಡು ವಸ್ತುಗಳಿವೆ ಎಂದು ಅರ್ಥ.

ಇದು ಎರಡು ವಿಧ; ಶಬ್ದಗತ ಮತ್ತು ವಸ್ತುಗತ. ಹೇಗೆಂದರೆ ಒಂದೇ ಮೇಜಿನ ಮೇಲೆ ಪುಸ್ತಕವೂ ಲೇಖನಿಯೂ ಇದೆ; ಎಂದರೆ ಪುಸ್ತಕ ಮತ್ತು ಲೇಖನಿ ಈ ಎರಡು ವಸ್ತುಗಳೂ ಮೇಜೆಂಬ ಒಂದೇ ಆಶ್ರಯದಲ್ಲಿದೆಯೆಂದು ತಾತ್ಪರ್ಯ. ಇದು ವಸ್ತುಗತ ಸಾಮಾನಾಧಿಕರಣ್ಯ. ಶಬ್ದಗತ ಸಾಮಾನಾಧಿಕರಣ್ಯವೆಂದರೆ ಸಮಾನ ವಿಭಕ್ತಿನಿರ್ದೇಶ. ಅಂದರೆ ಒಂದೇ ವಿಭಕ್ತಿಯಲ್ಲಿ ಪ್ರಯೋಗಿಸುವುದು. 'ಸರ್ವಂ''ಬ್ರಹ್ಮ' ಎಂಬ ಎರಡು ಪದವೂ ವಿಶೇಷಣ ವಿಶೇಷ್ಯ ಭಾವದಿಂದ ಒಂದೇ ವಿಭಕ್ತಿಯಲ್ಲಿದೆ. ಹೀಗೆ ಸಮಾನ ವಿಭಕ್ತಿಯಲ್ಲಿ ಪ್ರಯೋಗ ಮಾಡಲು ಕಾರಣವೇನೆಂಬಲ್ಲೀಗ ವಿಚಾರವಿರುವುದು ಅದ್ವೈತಿಗಳು, ಅಭೇದ ಅಂದರೆ ಐಕ್ಯ-ಇದುಕಾರಣವೆನ್ನುವರು. ಅಂದರೆ ಪ್ರಪಂಚವೂ,ಬ್ರಹ್ಮವೂ ಒಂದೇ ಎಂದು ಐಕ್ಯವನ್ನು ಮುಂದಿಟ್ಟು ಸಾಮಾನಾಧಿಕರಣ್ಯವನ್ನು ಸಾಧಿಸುವರು. ವಿಶಿಷ್ಟಾದ್ವೈತಿಗಳು ಹಾಗಲ್ಲ. ಅಭೇದನೆಂದರೆ ಐಕ್ಯವಲ್ಲ. ಶರೀರಾತ್ಮಭಾವ ರೂಪವಾದ ಅಭೇದ ದೇವೋऽಹಂ ಮನುಷ್ಯೋऽಹಂ ದೇವದತ್ತೋऽಹಂ ಇತ್ಯಾದಿ ಉದಾಹರಣೆಯನ್ನು ನೋಡಿ. ನಾನು ದೇವ ನಾನು ಮನುಷ್ಯ, ನಾನು ದೇವದತ್ತ ಇತ್ಯಾದಿ ಸ್ಥಳಗಳಲ್ಲಿ ನಾನು ಎಂಬ ವಸ್ತು ಬೇರೆ, ದೇವತೆ, ಮನುಷ್ಯ, ದೇವದತ್ತ ಎಂಬ ವಸ್ತುಗಳು ಬೇರೆಬೇರೆ. ನಾನು ಎಂಬುದು ಒಳಗಿರುವ ಜೀವಾತ್ಮನನ್ನು ಹೇಳುವುದು; ದೇವದತ್ತ ಇತ್ಯಾದಿಗಳು ಶರೀರ ವನ್ನು ಹೇಳುವುದು; ದೇವದತ್ತ ಇತ್ಯಾದಿಗಳು ಆತ್ಮಕ್ಕೆ ಹೆಸರಾಗುವುದಿಲ್ಲ. ಕರ್ಮಾನುಗುಣವಾಗಿ ಬೇರೊಂದು ಶರೀರ ಬಂದಾಗ ಮತ್ತೆ ಬೇರೆ ಹೆಸರಾಗುವುದು. ನಾನು ಎಂಬುದು ಮಾತ್ರ ಯಾವಾಗಲೂ ಅಳಿಯದಿರುವುದು. ಆದಕಾರಣ ಶರೀರವನ್ನು ಬೋಧಿಸುವ ದೇವದತ್ತಾದಿ ಪದಗಳನ್ನೂ ಆತ್ಮವಾಚಕವಾದ ನಾನು ಎಂಬುವ ಪದವನ್ನೂ ಒಂದೇ ವಿಭಕ್ತಿಯಲ್ಲಿ ನಿರ್ದೇಶ ಮಾಡಿದೆ. ಇದೀಗ ಸಾಮಾನಾಧಿಕರಣ್ಯ. ದೇವದತ್ತ ಶರೀರದೊಳಗಿನ ಜೀವಾತ್ಮನೆಂದರ್ಥ. ಹಾಗೆಯೇ 'ಇದಂ ಸರ್ವಂ ಬ್ರಹ್ಮ' ಎಂದರೆ ಸ್ಥೂಲ ಸೂಕ್ಷ್ಮ ರೂಪವಾದ ಈ ಸಮಸ್ತ ಚೇತನಗಳು ಅಚೇತನಗಳು ಎಲ್ಲಕ್ಕೂ ಈ ಪರಬ್ರಹ್ಮನು ಆತ್ಮನಾಗಿರುವನು. ಅವೆಲ್ಲವೂ ಈ ಪರಬ್ರಹ್ಮಕ್ಕೆ ಶರೀರ ವೆಂದು ತಾತ್ಪರ್ಯ. (ಆತ್ಮಕ್ಕೂ ಆತ್ಮನಾದ್ದರಿಂದ ಪರಮಾತ್ಮನೆನಿಸಿಕೊಳ್ಳುವನು). 'ದೇವದತ್ತೋऽಹಂ ಎಂಬಲ್ಲಿ ಅಹಂ ಎಂಬ ಜೀವಾತ್ಮಕ್ಕೆ ದೇವದತ್ತ

ನೆಂದು ಹೇಳುವ ವಸ್ತುವು ಹೇಗೆ ಶರೀರವೋ, ದೇವದತ್ತನೆಂಬ ಶರೀರಕ್ಕೆ ಅಹಂ ಎಂಬುವ ವಸ್ತುವು ಹೇಗೆ ಆತ್ಮವೋ, ಹಾಗೆಯೇ ಈ ಬ್ರಹ್ಮಕ್ಕೆ ಈ ಚೇತನಾಚೇತನಗಳು ಶರೀರ; ಅವುಗಳಿಗೆ ಇವನಾತ್ಮನು; ಇದೀಗ ಶರೀರಾತ್ಮ ಭಾವ. ಶರೀರವನ್ನು ಬೋಧಿಸುವ ಶಬ್ದವು ಶರೀರದೊಳಗಿನ ವಸ್ತುವನ್ನು ಹೇಳುವ ಶಬ್ದದೊಡನೆ ಒಂದೇ ವಿಭಕ್ತಿಯಲ್ಲಿರುವುದಲ್ಲಾ! ಇದೀಗ ಶರೀರಾತ್ಮ ಭಾವ ಮೂಲಕವಾದ ಅಭೇದ– ಸಾಮಾನಾಧಿಕರಣ್ಯವೆಂದು ಹೇಳಲ್ಪಡುವುದು. ಶರೀರವನ್ನೂ, ಆತ್ಮವನ್ನೂ ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ; ಆತ್ಮವನ್ನು ಬಿಟ್ಟು ಶರೀರವೂ ಶರೀರವನ್ನು ಬಿಟ್ಟು ಆತ್ಮವೂ ಇರುವುದು ಸಾಧ್ಯವಿಲ್ಲವಾದ್ದರಿಂದ 'ಅಪೃಥಕ್ಸಿದ್ಧಿ' ಸಂಬಂಧವೆನಿಸಿಕೊಳ್ಳುವುದು. ಈ ಕಾರಣದಿಂದಲೇ ಶರೀರವಾಚಿಯಾದ ದೇವದತ್ತನೆಂಬ ಶಬ್ದವು ಅದರೊಳಗಿನ ಜೀವಾತ್ಮನನ್ನು ಹೇಗೆ ಬೋಧಿಸುವುದೋ ಹಾಗೆಯೇ ಅದೇ ದೇವದತ್ತ ಶಬ್ದವು ಅವರೊಳಗಿನ ಜೀವಾತ್ಮನಿಗೂ ಅಂತರ್ಯಾಮಿಯಾದ ಪರಮಾತ್ಮನನ್ನು ಮುಖ್ಯ ವೃತ್ತಿಯಿಂದ ಅಂದರೆ ಶಕ್ತಿಯೆಂಬ ಅಭಿಧಾವೃತ್ತಿಯಿಂದ ವಾಚ್ಯವಾಗಿಯೇ ಬೋಧಿಸುವುದು. ಇದನ್ನೇ ಶ್ರುತಿಯು ಸ್ಪಷ್ಟಪಡಿಸಿದೆ. "ಯಃ ಪೃಥಿವ್ಯಾಂತಿಷ್ಠನ್ ಪೃಥಿವ್ಯಾ ಅಂತರೋಯಂ ಪೃಥಿವೀ ನವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮಂತರೋ ಯಮಯತಿ ಸತ ಆತ್ಮಾಂತರ್ಯಾಮ್ಯಮೃತಃ" "ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿಶ್ವೇತಕೇತೋ" ಇತ್ಯಾದಿ. ಅಹಂಚವಾಸುದೇವಃ–ಈ ಪ್ರಪಂಚವೆಲ್ಲಾ ಹೇಗೆ ವಾಸುದೇವನೋ ಹಾಗೆಯೇ ನಾನೂ ವಾಸುದೇವನು. ಅಂದರೆ ವಾಸುದೇವನು ನನಗೆ ಅಂತರ್ಯಾಮಿಯೆಂದರ್ಥ. ಈ ರೀತಿ ಸುರನರ ತಿರ್ಯಗಾದಿ ಸಮಸ್ತವೂ ನಾನೂ ಸಹ ವಾಸುದೇವನಿಗೆ ಶರೀರವಾಗಿರತಕ್ಕವು. ವಾಸುದೇವ ಒಬ್ಬನೇ ಸರ್ವನಿಯಾಮಕನು. ಸರ್ವೇಶ್ವರೇಶ್ವರ; ಬ್ರಹ್ಮರುದ್ರಾದಿಗಳಲ್ಲ. ಆದಕಾರಣ ಶರೀರವೂ ಅವಯವಗಳೂ ಒಳಗಿನ ಆತ್ಮದ ಮೇಲ್ಮೆಗಾಗಿಯೇ ಹೇಗಿರುವುವೋ; ಅವಯವಗಳು ಪರಸ್ಪರ ಹೇಗೆ ಕಚ್ಚಾಡುವುದಿಲ್ಲವೋ; ಒಂದಕ್ಕೊಂದು ಸಹಕರಿಸುವುವೋ; ಅದೇ ರೀತಿ ನಾವೆಲ್ಲರೂ ನಮಗೆಲ್ಲಾ ಅಂತರಾತ್ಮನಾದ ಆ ಭಗವಂತನ ಅತಿಶಯಕ್ಕಾಗಿಯೇ, ಆರಾಧನೆಗಾಗಿಯೇ ಸೃಷ್ಟಿಸಲ್ಪಟ್ಟರತಕ್ಕವರು. ನಮ್ಮನಮ್ಮ

ವರ್ಣಾಶ್ರಮ ಧರ್ಮಗಳನ್ನನುಸರಿಸಿ ಭಗವಂತನನ್ನು ಆರಾಧಿಸುತ್ತಾ ಒಬ್ಬ ರೊಬ್ಬರನ್ನು ಹಿಂಸಿಸದೆ ಪರಸ್ಪರಾನುಕೂಲರಾಗಿಯೇ ಇದ್ದು ಎಲ್ಲರೂ ಸೇರಿ ಭಗವಂತನ ಆರಾಧನೆಯನ್ನು ಮಾಡುತ್ತಿರಬೇಕೆಂದು ತಾತ್ಪರ್ಯ.

ಯಾವನ ಹೃದಯದಲ್ಲಿ ಸ್ವರೂಪ ರೂಪಾದಿಗಳಿಂದ ಅಪರಿಚ್ಛಿನ್ನನಾದ ಭಗವಂತನು ನೆಲೆಸಿರುವನೋ, ಅಂತಹವನಿಗೆ 'ಯಾರನ್ನೂ ಯಾವ ವಿಧದಲ್ಲೂ ದ್ವೇಷಿಸದೆ ಪರಸ್ಪರಾನುಕೂಲರಾಗಿಯೇ ಬಾಳುವ' ಎಂಬ ಬುದ್ಧಿಯು ಸ್ಥಿರ ವಾಗಿರುವುದು. ಅಂತಹವರೀಗ ವಿಷ್ಣು ಭಕ್ತರು. ಅವರನ್ನು ಬಿಟ್ಟು ದೂರ ಸರಿ ಎಂದು ಯಮನು ದೂತನಿಗೆ ತಿಳಿಸಿದನು || ೧೯ ||

'ಹರಿಹರ ಮಧುಸೂದನ ಪ್ರಪನ್ನಾನ್' ಎಂದು ಪ್ರಾರಂಭದಲ್ಲಿ ಹೇಳಿದ ಅರ್ಥವನ್ನೇ ಉಪಸಂಹಾರದಲ್ಲೂ ಅದೇ ಪ್ರಪನ್ನ ಲಕ್ಷಣವನ್ನು ನಿರೂಪಿಸಿ ನಿಗಮಿಸುತ್ತಾನೆ.

ಕಮಲನಯನ! ವಾಸುದೇವ! ವಿಷ್ಣೋ!
ಧರಣಿಧರ! ಅಚ್ಯುತ! ಶಂಖಚಕ್ರಪಾಣೇ! ||
ಭವ ಶರಣಮಿತೀರಯಂತಿ ಯೇವೈ
ತ್ಯಜಭಟ! ದೂರತರೇಣ ತಾನಪಾಪಾನ್ ||೨೦||

ಕಮಲನಯನ–ಕಮಲದಂತೆ ಕಣ್ಣುಳ್ಳವನೇ ! ಪುಂಡರೀಕಾಕ್ಷನೇ ! ವಾಸುದೇವ–ವಸುದೇವನ ಮಗನಾಗಿ ಅವತರಿಸಿರುವವನೇ !, ವಿಷ್ಣೋ–ಸರ್ವ ವ್ಯಾಪಕನೇ !, ಧರಣಿಧರ–ವರಾಹನಾಗಿ ಅವತರಿಸಿ ಭೂಮಿಯನ್ನು ಉದ್ಧರಿ-ಸಿದವನೇ !, ಅಚ್ಯುತ–ಆಶ್ರಿತರನ್ನು ಕೈ ಬಿಡದವನೇ ! ಆಶ್ರಿತರನ್ನೂ ತಮ್ಮ ಧರ್ಮದಿಂದ ಚ್ಯುತರಾಗದಂತೆ ನಡೆಸುವವನೇ !, ಶಂಖಚಕ್ರಪಾಣೇ–ಶಂಖ ಚಕ್ರಾದಿ ಪಂಚಾಯುಧಧರನೇ !, ತ್ವಂ–ನೀನು, ಶರಣಂಭವ–ಉಪಾಯ ವಾಗಿರು (ಸಾಧನವಾಗಿರು), ಇತಿ–ಹೀಗೆಂದು, ಯೇ–ಯಾರು, ಈರಯಂತಿ–ಶಬ್ದವನ್ನು ಹೇಳುವರೋ, ಅಪಾಪಾನ್ ತಾನ್–ಪಾಪವಿಲ್ಲದ ಅವರನ್ನು ದೂರ ತರೇಣತ್ಯಜ–ದೂರದಿಂದಲೇ ಬಿಟ್ಟು ಸರಿದು ಹೋಗು ಎಂದು ಅರ್ಥ.

ಪ್ರಪತ್ತಿ, ಪ್ರಪನ್ನ ಎಂಬಿವಕ್ಕೆ ಪ್ರಧಾನ ಪ್ರಮಾಣವಾದ ಪಾಂಚರಾತ್ರ ಶಾಸ್ತ್ರದಲ್ಲೂ ಶರಣಾಗತಿಗೆ (ಪ್ರಪತ್ತಿಗೆ) ಇದೇ ಲಕ್ಷಣವು ಹೇಳಲ್ಪಟ್ಟಿದೆ.

" ತ್ವಮೇವೋಪಾಯ ಭೂತೋಮೇ ಭವೇತಿ ಪ್ರಾರ್ಥನಾಮತಿಃ ||
ಶರಣಾಗತಿರಿತ್ಯುಕ್ತಾ ಸಾದೇವೇಽಸ್ಮಿನ್ ಪ್ರಯುಜ್ಯತಾಂ || "

ತ್ವಮೇವ–ನೀನೇ, ಮೇ–ನನಗೆ, ಉಪಾಯ ಭೂತೋಭವ–ಉಪಾಯ ವಾಗಿರು, ಇತಿ–ಹೀಗೆಂಬ, ಪ್ರಾರ್ಥನಾಮತಿಃ–ಪ್ರಾರ್ಥನಾ ರೂಪವಾದ ಜ್ಞಾನವು, ಶರಣಾಗತಿಃ ಇತಿ–ಶರಣಾಗತಿ ಅಥವಾ ಪ್ರಪತ್ತಿ ಎಂದು, ಉಕ್ತಾ–ಹೇಳಲ್ಪಟ್ಟಿದೆ, ಸಾ–ಆ ಪ್ರಪತ್ತಿಯು, ಅಸ್ಮಿನ್‌ದೇವೇ–ಈ ಭಗವಂತನಲ್ಲಿ ಅರ್ಚಾ ವಮೂರ್ತಿಯಲ್ಲಿ, ಪ್ರಯುಜ್ಯತಾಂ–ಉಪಯೋಗಿಸಲ್ಪಡಲಿ; ಪ್ರಾರ್ಥನಾ ರೂಪವಾದ ಈ ಬುದ್ಧಿಯು ಹುಟ್ಟಿದ ಮೇಲೆ 'ನೀನು ನನಗೆ ಶರಣನಾಗು' ಎಂದು ಬಾಯಲ್ಲೂ ಹೇಳುವನೆಂದು ತಾತ್ಪರ್ಯ.

ಈ ಪ್ರಪತ್ತಿಯು ತ್ರಿಕರಣದಲ್ಲೂ ಇದ್ದರೆ– ಉತ್ತಮವು. ಕೇವಲ ಮಾನಸ್ಸಿನಲ್ಲಿ ನೆನೆದರೂ ಬಾಯಲ್ಲಿ ಮಾತ್ರ ಹೇಳಿದರೂ ಶರೀರದಿಂದ ಮಾಡಿ ದರೂ ಕೆಲಸ ಕೈಗೂಡುವುದರಲ್ಲಿ ಸಂದೇಹವಿಲ್ಲ. ಸರ್ವಜ್ಞನಾಗಿ ಸರ್ವಶಕ್ತನಾಗಿ ಸರ್ವಸ್ವಾಮಿಯಾಗಿ ಸರ್ವ ಶರೀರಕನಾಗಿರುವ ಭಗವಂತನು ಯಾರೂ ಅಪೇಕ್ಷಿಸದೆಯೇ ತಾನಾಗಿಯೇ ಎಲ್ಲರನ್ನೂ ರಕ್ಷಿಸುವನು. ರಕ್ಷ್ಯ ವರ್ಗವಾದ ಚೇತನನು ತನ್ನ ರಕ್ಷಣದಲ್ಲಿ ತಾನಾಗಿ ಆಭಿಮುಖ್ಯ ತೋರಿದ ಮಾತ್ರದಿಂದಲೇ ಉತ್ಸಾಹಹೊಡನೆ ಕಾಪಿಡುವನಲ್ಲವೆ ? ಹೀಗಿರಲು ಮನೋವಾಕ್ಕಾಯ ಗಳಲ್ಲಿ ಯಾವೊಂದರ ಮೂಲಕ ಆಭಿಮುಖ್ಯ ತೋರಿದರೂ ಕಾಪಿಟ್ಟೇ ಕಾಪಿಡುವನು.

ಕುರುಕುಲಾಧಮನೆನಿಸಿದ ದುರ್ಯೋಧನನು ನೆರೆದ ಸಭೆಯಲ್ಲಿ ಸೀರೆ ಸೆಳೆಸಿದಾಗ ಆ ದ್ರೌಪದಿಯು ಮಾಡಿದ ಪ್ರಪತ್ತಿಯೂ, ಇಲ್ಲಿ ಯಮನು ಹೇಳಿರುವ ಪ್ರಪತ್ತಿಯೂ ಒಂದೇ ಆಗಿರುವುದು.

"ಶಂಖಚಕ್ರಗದಾಪಾಣೇ ! ದ್ವಾರಕಾನಿಲಯ ! ಅಚ್ಯುತ !
ಗೋವಿಂದ ! ಪುಂಡರೀಕಾಕ್ಷ ! ರಕ್ಷಮಾಂ ಶರಣಾಗತಾಂ ||"

ಇದು ದ್ರೌಪದಿಯ ಪ್ರಪತ್ತಿ–ಶರಣಾಗತಿ; ಇವೆರಡರಲ್ಲೂ ಪದಗಳು ಸಮಾನವಾಗಿವೆ; ಕಮಲನಯನ–ಪುಂಡರೀಕಾಕ್ಷ, ವಾಸುದೇವ–ದ್ವಾರಕಾ

ನಿಲಯ; ಧರಣಿಧರ–ಗೋವಿಂದ; ಅಚ್ಯುತ–ಅಚ್ಯುತ; ಶಂಖಚಕ್ರಪಾಣೇ–ಶಂಖಚಕ್ರ ಗದಾಪಾಣೇ; ಶರಣಂ ಭವ–ರಕ್ಷಮಾಂ ಶರಣಾಗತಾಂ ಎಂದು.

ಕಮಲನಯನ–ಪುಂಡರೀಕಾಕ್ಷ ಎಂಬ ಪದಗಳಿಂದ 'ತಸ್ಯಯಥಾ ಕಪ್ಯಾಸಂ ಪುಂಡರೀಕ ಮೇವಮಕ್ಷಿಣೀ' 'ರಾಮಃಕಮಲಪತ್ರಾಕ್ಷ - ಸ್ಸರ್ವಸತ್ವಮನೋಹರಃ' ಎಂಬ ದಿವ್ಯ ಮಂಗಳ ವಿಗ್ರಹವು ಹೇಳಲ್ಪಡುವುದು. ಮಂತ್ರರತ್ನವೆಂಬ ದ್ವಯಮಂತ್ರದಲ್ಲಿಯ 'ಚರಣೌ' ಎಂಬ ಪದವು ದಿವ್ಯ ಮಂಗಳ ವಿಗ್ರಹವನ್ನು ಸೂಚಿಸುವುದೀಗ ಈ ಅರ್ಥಕ್ಕೆ ಮೂಲವಾಗಿದೆ. "ವಾಸುದ್ದೇವ ದ್ವಾರಕಾ ನಿಲಯ" ಎಂಬ ಪದಗಳಿಂದ "ಏಷನಾರಾಯಣಃ ಶ್ರೀಮಾನ್ ಕ್ಷೀರಾರ್ಣವನಿಕೇತನಃ ನಾಗಪರ್ಯಂ ಕಮುತ್‌ಸೃಜ್ಯಹ್ಯಾಗತೋ ಮಧುರಾಂ ಪುರೀಂ" ಎಂಬಂತೆ ಮಧುರಾ ದ್ವಾರಕೆಗಳಲ್ಲಿ ಸನ್ನಿಹಿತನಾಗಿರುವನೆಂಬ ಸೌಲಭ್ಯ ಪ್ರತಿಪಾದಿತವಾಗಿದೆ. ಇದು ಮಂತ್ರರತ್ನದಲ್ಲಿಯ ನಾರ ಪದದ ಅರ್ಥವು. ಈ ಸೌಲಭ್ಯ ಗುಣವೀಗ ಶರಣಾಗತಿಗೆ ಅವಶ್ಯಾಪೇಕ್ಷಿತವಾದುದು. ವಿಷ್ಣೋ–ಸರ್ವಾಂತರ್ಯಾಮಿಯಾದ ನೀನು ನನ್ನ ಮನದಲ್ಲೇನಿದೆಯೆಂದು ಚೆನ್ನಾಗಿ ಅರಿತಿರುವೆಯಲ್ಲವೆ? ಧರಣಿಧರ–ಗೋವಿಂದ ಈ ಪದಗಳಿಂದ, ಗೋ ಎಂದರೆ ಭೂಮಿ ಮತ್ತು ದನ–ಭೂಮಿಯನ್ನೂ ದನಗಳನ್ನೂ ರಕ್ಷಿಸಿದನನೇ! 'ನನ್ನನ್ನು ಕಾಪಾಡು' ಎಂದು ಕೇಳಿಕೊಳ್ಳಲೂ ತಿಳಿಯದವರನ್ನು ನೀನಾಗಿ ರಕ್ಷಿಸುವೆ; ಹೀಗಿರಲು ನಾನಾಗಿ ಕೇಳಿಕೊಳ್ಳುವಾಗ ರಕ್ಷಿಸಿಯೇ ರಕ್ಷಿಸುವಿ. ಅಚ್ಯುತ ಅಚ್ಯುತ–ಭಗವಂತನೇ ರಕ್ಷಕನೆಂಬ ನಿಶ್ಚಯ ಜ್ಞಾನದಿಂದ ಆಶ್ರಿತರನ್ನು ಚ್ಯುತಿಗೊಳಿಸದವನೇ! ಆಶ್ರಿತರು ಭಗವಂತನು ನಮ್ಮನ್ನು ರಕ್ಷಿಸಿಯೇ ರಕ್ಷಿಸುವನು ಎಂದು ನಿರ್ಭರರಾಗಿ ನಿರ್ಭಯರಾಗಿರುವರೆಂದು ತಾತ್ಪರ್ಯ. ಇದರಿಂದ ಪ್ರಪತ್ತಿಗೆ ಮುಖ್ಯವಾಗಿ ಬೇಕಾದ ಮಹಾವಿಶ್ವಾಸವು ಹೇಳಲ್ಪಟ್ಟಿತು. "ಶಂಖಚಕ್ರಪಾಣೇ–ಶಂಖಚಕ್ರ ಗದಾಪಾಣೇ" ರಕ್ಷಣಕ್ಕೆ ಬೇಕಾದ ಸಾಮಗ್ರಿಗಳೆಲ್ಲಾ ಸಂಪೂರ್ಣವಾಗಿವೆಯೆಂದು ತಾತ್ಪರ್ಯ. ಈ ಆಯುಧಗಳು ಕಟ್ಟಿಗೆ ಹೊರೆಯಂತೆ ಕೇವಲ ಹೊರೆಯಲ್ಲವಲ್ಲಾ! ಪ್ರತಿಯೊಂದೂ ಆಶ್ಚರ್ಯಕರವಾದ ಕೆಲಸಗಳನ್ನು ಮಾಡುವಂತಹವು. ಹೀಗಿರಲು ಎಲ್ಲಾ ಆಯುಧಗಳೂ ಒಟ್ಟುಗೂಡಿರುವಲ್ಲಿ ವಿರೋಧಿಗಳೆಲ್ಲಾ ತೊಲಗುವುದರಲ್ಲೇನು ಸಂದೇಹ? ಈ ಅಂಶವನ್ನೇ ಶ್ರೀಪರಾಶರ ಭಟ್ಟರವರು–

Funding: Tattva Heritage Foundation,Kolkata. Digitization: eGangotri.



" ಪಾತು ಪ್ರಣತ ರಕ್ಷಾಯಾಂ ವಿಲಂಬ ಮಸಹನ್ನಿವ ।
ಸದಾಪಂಚಾಯುಧೀಂ ಬಿಭ್ರತ್ಸನಃ ಶ್ರೀರಂಗನಾಯಕಃ ॥ "

ಎಂದಿರುವರು. ಶ್ರೀರಂಗನಾಥನು ಆಶ್ರಿತರನ್ನು ರಕ್ಷಿಸಲು ಕ್ಷಣ ಕಾಲ ಸಾವಕಾಶವನ್ನೂ ಸಹಿಸದೆ ಸರ್ವದಾ ಪಂಚಾಯುಧಗಳನ್ನು ಧರಿಸಿರುವನು ಎಂದು ತಾತ್ಪರ್ಯ.

ಈ ರೀತಿ ಶರಣಾಗತೆಯಾದ ದ್ರೌಪದಿಯ ಪ್ರಪತ್ತಿಯಿಂದ ಅವಳನ್ನು ಹೇಗೆ ಇಷ್ಟ ವಸ್ತ್ರವನ್ನು ಕೊಟ್ಟು ರಕ್ಷಿಸಿದನೋ ಹಾಗೆಯೇ ಅವನ ನಿತ್ಯ ಕೈಂಕರ್ಯಕ್ಕಾಗಿಯೇ ಹಾತೊರೆಯುತ್ತಿರುವ ಅವನನ್ನೇ ಶರಣವಾಗಿ ನಂಬಿರುವ ನಮ್ಮನ್ನು ಕಾಪಾಡಿಯೇ ಕಾಪಾಡುವನೆಂದು ನಾವು ತಿಳಿಯಬೇಕು.

ಆದಕಾರಣ ಭಗವಂತನಲ್ಲಿ ಪ್ರಪತ್ತಿ ಮಾಡಿ ಅದರ ಮಹಿಮೆಯಿಂದಲೇ ದಗ್ಧಸಮಸ್ತ ಪಾಪರಾದ ಆ ಭಗವದ್ಭಕ್ತರನ್ನು ಬಿಟ್ಟು ದೂರ ಸರಿ. ಪಾಪಿಗಳ ವಿಷಯದಲ್ಲೀಗ ನಮಗೆ ಅಧಿಕಾರವೆಂದು ಯಮನು ತಿಳಿಸುವನು ॥೨೦॥

ಭಗವದ್ಭಕ್ತರನ್ನು ಬಿಟ್ಟು ದೂರ ಸರಿಯದಿದ್ದರೇನು ? ಎಂದು ಭಟನು ಕೇಳಿದ್ದಕ್ಕೆ ಯಮನು ಉತ್ತರಿಸುವನು.

ಮನಸಿ ವಸತಿ ಯಸ್ಯ ಸೋಽವ್ಯಯಾತ್ಮಾ
ಪುರುಷವರಸ್ಯ ನತಸ್ಯ ದೃಷ್ಟಿಪಾತೇ ।
ತವ ಗತಿ ರಥವಾ ಮಮಾಸ್ತಿ ಚಕ್ರ-
ಪ್ರತಿಹತವೀರ್ಯ ಬಲಸ್ಯ ಸೋಽನ್ಯಲೋಕ್ಯಃ ॥೨೧॥

ಅವ್ಯಯಾತ್ಮಾ ಸಃ-ಅಖಿಲ ಹೇಯ ಪ್ರತ್ಯನೀಕನಾಗಿ ಕಲ್ಯಾಣೈಕತಾನನಾಗಿ ಸರ್ವಸ್ವಾತ್ಮ್ಯಪರನಾದ ಆ ಭಗವಂತನು, ಯಸ್ಯಮನಸಿ-ಯಾವನ ಮನಸ್ಸಿನಲ್ಲಿ, ವಸತಿ-ನಿತ್ಯ ವಾಸಮಾಡುವನೋ, ಅವನೀಗ ಪುರುಷ ಶ್ರೇಷ್ಠನು, ತಸ್ಯ ಪುರುಷ ವರಸ್ಯ-ಆ ಪುರುಷ ಶ್ರೇಷ್ಠನ, ದೃಷ್ಟಿಪಾತೇ-ದೃಷ್ಟಿ ಬೀಳುವ ಜಾಗದಲ್ಲೆಲ್ಲಾ, ತವ-ನಿನಗೆ, ಅಥವಾ ಮಮ-ನನಗಾಗಲಿ, ಗತಿಃ-ಗಮನ ಸಾಮರ್ಥ್ಯವು, ನಾಸ್ತಿ-ಇಲ್ಲ. ಆಳಾದ ನಿನಗೂ ನಿನ್ನ ಯಜಮಾನನಾದ ನನಗೂ ಫಲ ಒಂದೇ ವಿಧವೆಂದು ತಾತ್ಪರ್ಯ. ಅತಿಕ್ರಮಿಸಿ ಅವರ ದೃಷ್ಟಿಗೆ ಬಿದ್ದೆವೋ ! ಏನಾಗುವುದು ಗೊತ್ತೆ ? ಚಕ್ರಪ್ರತಿಹತ ವೀರ್ಯ ಬಲಸ್ಯ-

ಬಲವೆಂದರೆ ಧಾರಣ ಸಾಮರ್ಥ್ಯ; ವೀರ್ಯವೆಂದರೆ ತಾನು ಧೈರ್ಯ ಗೆಡದೆ ಮತ್ತೊಬ್ಬನನ್ನು ಧೈರ್ಯಗುಂದಿಸುವುದು. ಇವುಗಳೂ ಮತ್ತು ಇನ್ನೂ ನಮ್ಮ ಎಲ್ಲ ವಿಧ ಶಕ್ತಿಗಳೂ ಆ ಭಗವಂತನ ಚಕ್ರಾಯುಧದಿಂದ ಪ್ರತಿಹತ ವಾಗುವುವು. ನಾವು ಅಧಿಕಾರದಲ್ಲಿ ನಿಯುಕ್ತರಾಗಿರುವುದರಿಂದ ನಮ್ಮ ಅಧಿ ಕಾರವಿರುವವರೆಗೂ ಬದುಕಿರುವೆವು; ಇಲ್ಲದಿದ್ದರೆ ನಮಗೂ ದಾನವರ ಗತಿಯೇ ಸಿದ್ಧ. ಹೆಚ್ಚು ಹೇಳಿಯೇನು? ಇದೀಗ ನಿರ್ಣಯದ ಮಾತು; ಸೋsನ್ಯ ಲೋಕ್ಯಃ—ಸಃ—ಆ ಪ್ರಪನ್ನನು, ಅನ್ಯಲೋಕ್ಯಃ—ಬೇರೆ ಲೋಕಕ್ಕೆ ಅರ್ಹನಾದ ವನು. ನಮ್ಮ ಲೋಕಕ್ಕೂ ಅವನು ಹೋಗುವ ಲೋಕಕ್ಕೂ ಈಷದಪಿ ಸಂಬಂಧವಿಲ್ಲ. ನಮ್ಮ ವಾಕ್ ಮನಸ್ಸುಗಳಿಗೇ ಆ ಲೋಕ ಗೋಚರವಲ್ಲ; ನಮಗೆ ಮಾತ್ರವಲ್ಲ; ಬ್ರಹ್ಮಾದಿಗಳಿಗೂ ಹಾಗೆಯೇ; ಆದಕಾರಣ ಅಂತಹವ ರನ್ನು ಕಂಡರೆ ದೂರದಿಂದಲೇ ನಮಸ್ಕರಿಸಬೇಕು. ಆದರಿಂದ ನಮ್ಮ ಆತ್ಮೋ ಜ್ಜೀವನವಾದೀತು.

ಭಗವಂತನ ನಿರ್ಹೇತುಕಕೃಪಾಕಟಾಕ್ಷದಿಂದ ತತ್ವಹಿತ ಪುರುಷಾರ್ಥ ಗಳನ್ನು ಯಥಾವಸ್ಥಿತವಾಗಿ ಅರಿತಿರುವ ಭಕ್ತಿಸಾರ ಮುನೀಂದ್ರರು (ತಿರು ಮಳಿಶೈಯಾಳ್ವಾರ್) ಇದೇ ಯಮ ಕಿಂಕರ ಸಂವಾದವನ್ನು ಒಂದೇ ಪದ್ಯ ದಲ್ಲಿ ಪಾಡಿರುವರು. "ಯಮೋಕ್ತ ಪ್ರಪನ್ನ ಲಕ್ಷಣದ ಫಲಿತಾಂಶವಾದ ಮತ್ತೂ ಸಾರ ಭೂತವಾದ ಲಕ್ಷಣವನ್ನು ಹೇಳಿರುವರು."

"ತಿರಮ್ಬೇಲ್ ಮಿರ್ಱ ಕಣ್ಡೀರ್ ತಿರುವಡಿ ತನ್ನಾಮಂ,
ಮಱನ್ದುಂ ಪುಱನ್ದೊಳಾ ಮಾನ್ದರೈಯಿರೈಂಜಿಯುಂ
ಶಾದುವರಾಯ್ ಪೋದುಮಿರ್ಱಗಳೆನ್ನಾರ್
ನಮನುಂ ತರ್ ತೂದುವರೈಕ್ಕೂವಿ ಚ್ಚೆವಿಕ್ಕು ||

"ಭಗವದ್ಭಕ್ತರ ವಿಷಯದಲ್ಲಿ ಪ್ರಾತಿಕೂಲ್ಯವನ್ನು ತೊರೆಯುವುದು ಮಾತ್ರವಲ್ಲ; ಅನುಕೂಲ್ಯ ರೂಪವಾದ ನಮಸ್ಕಾರಾದಿಗಳನ್ನೂ ಮಾಡಿ ಹೋಗಿರಿ" ಎಂದು ಯಮನು ಭಟರಿಗೆ ಹೇಳಿ, "ಭಗವಂತನನ್ನು ಮರೆತರೂ ಚಿಂತೆಯಿಲ್ಲ; ದೇವತಾಂತರಗಳನ್ನಾಶ್ರಯಿಸದಿದ್ದರೆ ಸಾಕು; ಅದೇ ಭಗವದ್ಭಕ್ತ ನಿಗೆ ಲಕ್ಷಣ" ವೆಂದು ತಿಳಿಸಿದನೆಂದು ತಾತ್ಪರ್ಯ. ಪತಿಸೇವೆ ಮಾಡದಿದ್ದರೂ ಪರಪುರುಷ ಸಂಬಂಧವಿಲ್ಲದಿರುವುದೇ ಹೇಗೆ ಪಾತಿವ್ರತ್ಯವೆನಿಸಿಕೊಳ್ಳುವುದೋ ಇದೂ ಹಾಗೆಯೇ.

ಈ ರೀತಿ ಅಪರಿಚ್ಛಿನ್ನವಾದ ಭಗವನ್ಮಹಿಮೆಯನ್ನು ಕಂಡಿರುವುದರಿಂದಲೂ, ಪ್ರಪತ್ತಿಯಲ್ಲೇ, ನಿಷ್ಠರಾಗಿರುವುದರಿಂದಲೂ, ಪಾಪಿಗಳಲ್ಲಿ ಮಾತ್ರ ಯಮನ ಅಧಿಕಾರವಿರುವುದರಿಂದಲೂ, ಯಮನಿಗೆ ಪ್ರಪನ್ನರ ವಿಷಯದಲ್ಲಿ ಅಧಿಕಾರವಿಲ್ಲದೆ ಭಯವಿರುವುದರಿಂದಲೂ, ಇದನ್ನೆಲ್ಲಾ ತಾವು ಕಂಡಿರುವುದರಿಂದಲೇ ಭಕ್ತಾಂಘ್ರಿರೇಣು ಮುನಿಗಳು (ತೊಂಡರಡಿ ಪ್ಪೊಡಿಯಾಳ್ವಾರ್) 'ನಾವಲಿಟ್ಟುಳಿತರು ಹಿನ್ನೋಂನಮನ್ತಮರ್ ತಲೈಹೆಳ್ ವಿಾತೇ" ಎಂದು ಪಾಡಿರುವರು. "ಭಗವಂತನ ನಾಮ ಮಹಿಮೆಯಿಂದ ನಮ್ಮೆಲ್ಲ ಪಾಪಗಳೂ ಧ್ವಂಸವಾದುವು. ಇನ್ನು ಭಗವದ್ಭಕ್ತರಾದ ನಮ್ಮ ವಿಷಯದಲ್ಲಿ ವಿಷಯೇಂದ್ರಿಯಾದಿ ಸಮಸ್ತ ಪ್ರತಿಬಂಧಕಗಳೂ ಏನೂ ಮಾಡಲಾರವು. ಜಯಘಾರ ಮಾಡುತ್ತಾ ಯಮನ ಮತ್ತು ಅವನ ಭಟರ ತಲೆ ಮೇಲೆಯೇ ಕಾಲಿಟ್ಟು ತಿರುಗಾಡುವೆವು' ಎಂದು ಭಗವನ್ನಾಮರೂಪವಾದ ದ್ವಯಮಂತ್ರದ ಅನುಸಂಧಾನ ಪ್ರಭಾವದಿಂದ ಭಗವಂತನೇ ಉಪಾಯೋಪೇಯಗಳೆಂದು ನಿರ್ಣಯಿಸಿ ನಡೆಯುತ್ತಿರುವ ನಮಗೆ ಯಮ ಮತ್ತು ಅವನ ಭಟರ ಭಯವಿಲ್ಲವೆಂದು ತಾತ್ಪರ್ಯ.

ನಮ್ಮಾಳ್ವಾರೂ ಸಹ 'ನಮನುಕ್ಕಿಂಗು ಯಾದೊನ್ನುಮಿಲ್ಲೈ' ಎಂದಿರುವರು. ತಮ್ಮ ಉಪದೇಶದಿಂದ ಪ್ರಪಂಚದ ಜನವೆಲ್ಲಾ ಶ್ರೀ ವೈಷ್ಣವರಾದರು. ಆಗ ಅವರಿಗೆಲ್ಲಾ ಮಂಗಳಾಶಾಸನಮಾಡುವರು. ಇಂತಹ ಭಗವದ್ಭಕ್ತರ, ಭಾಗವತರ ಸಮೃದ್ಧಿಯುಂಟಾದಮೇಲೆ ಪಾಪಫಲವನ್ನನುಭವಿಸುವ ಜನವೇ ಲೋಕದಲ್ಲಿಲ್ಲದಾಗ, ನರಕಲೋಕಕ್ಕೆ ಆಳಿಲ್ಲದಾಯಿತು. ಹೇಗಾದರೂ ಒಬ್ಬನಾದರೂ ನರಕಕ್ಕೆ ಯೋಗ್ಯನಾದವನು ಲಭಿಸುವನೋ ಎಂದು ಹುಡುಕುವಕೆಲಸವೂ ಯಮನಿಗಿಲ್ಲದಾಯಿತು. ಭಗವದ್ಭಕ್ತರಲ್ಲದವರೇ ಇಲ್ಲದಿರುವುದೀಗ ಇದಕ್ಕೆ ಕಾರಣ, ವೆಂದು ತಾತ್ಪರ್ಯ.

ತಿರುಮಂಗೈಯಾಳ್ವಾರೂ ಕೂಡ — 'ವಳ್ಳಲೇಉಉತಮರ್ಕೆನ್ನುಂ ನರ್ಮ ತಮರ್ ಕಳ್ಳರ್ ಪೋಲ್' ಎಂದು ಪಾಡಿದಾರೆ. "ಭಗವಂತನ ಕೊಡುಗೈಯನ್ನು ಬಯಲಿಗೆ ತಂದವರು ಜ್ಞಾನಿಗಳು. ಅವರ ಇಷ್ಟಾರ್ಥವನ್ನೂ ಪೂರೈಸಿಕೊಡುವ ಪರಮೋದಾರನೇ! ಯಮಭಟರು ನಿನ್ನ ಭಕ್ತರನ್ನು ಕಂಡಾಗಲೆಲ್ಲಾ ತಮ್ಮ ತಲೆ ಮರೆಸಿಕೊಂಡು ಕಳ್ಳರಂತೆ ಬೇರೆ ಕಡೆಗೆ ತೆರಳು–

ವರು. ಕಳ್ಳರು ಜನರ ಕಣ್ಣಿಗೇ ಹೇಗೆ ಬೀಳುವುದಿಲ್ಲವೋ ಹಾಗೆಯೇ ಯಮ ಭಟರುನಿನ್ನ ಭಕ್ತರ ಕಣ್ಣಿಗೇ ಬೀಳ ವುದಿಲ್ಲ. ' ವೆಂದು ತಾತ್ಪರ್ಯ.

'ಪರಿಹರ' ಎಂದು ತೊಡಗಿ "ಸೋಽನ್ಯಲೋಕ್ಯಃ" ವರೆಗಿನ ಈ ಪ್ರಬಂಧ ದಿಂದ 'ಇಲ್ಲಿ ಹೇಳಿರುವ ಕ್ರಮದಲ್ಲಿ ಪ್ರಪತ್ತಿಯಲ್ಲಿ ನೆಲೆಸಿಂತು ಪ್ರಪನ್ನನೆನಿಸಿ-ಕೊಂಡಿರುವವನಿಗೆ ಯಮ ಮತ್ತು ಅವನ ಭಟರ ಭಯವು ಇಲ್ಲವೇ ಇಲ್ಲ' ವೆಂದೀಗ ತಿಳಿದು ಬರುವ ಸಾರಾಂಶ ||೨೧||

ಕಾಲಿಂಗಉವಾಚ :—

ಇತಿ ನಿಜ ಭಟಶಾಸನಾಯ ದೇವೋ
ರವಿ ತನಯಸ್ಸ ಕಿಲಾಹ ಧರ್ಮರಾಜಃ ।
ಮಮ ಕಥಿತಮಿದಂಚ ತೇನ ತುಭ್ಯಂ
ಕುರುವರ ! ಸಮ್ಯಗಿದಂ ಮಯಾಪಿ ಚೋಕ್ತಂ ||೨೨||

ಭೀಷ್ಮಾಚಾರ್ಯರನ್ನು ಕುರಿತು ಕಳಿಂಗದೇಶದಿಂದ ಬಂದ ಬ್ರಾಹ್ಮಣನು ಹೇಳುವನು; ರವಿತನಯಃ – ಕರ್ಮಸಾಕ್ಷಿಯಾದ ಸೂರ್ಯನ ಮಗನಾದ, ದೇವಃ – ವ್ಯವಹಾರಜ್ಞನಾದ, ಸಃ, ಧರ್ಮರಾಜಃ – ಧರ್ಮರಂಜಕ ನಾದ ಆ ಯಮನು, ನಿಜಭಟಶಾಸನಾಯ – ತನ್ನ ಭಟನನ್ನು ನಿಯಮಿಸಲು ಹೊರಟು, ಇತಿ–ಈ ರೀತಿ ಎಂದರೆ 'ಪರಿಹರ' ತೊಡಗಿ 'ಸೋಽನ್ಯಲೋಕ್ಯಃ ಎಂಬುವವರೆಗಿನ ಮಾತನ್ನು, ಆಹ, ಕಿಲ–ಹೇಳಿದನಲ್ಲವೇ? , ಇದಂಚ ತೇನ ಮಮಕಥಿತಂ – ಇದು ಯಮಭಟನಿಂದ ನನಗೆ ಹೇಳಲ್ಪಟ್ಟಿತು. ಹೇ ಕುರುವರ ! ಎಲೈಭೀಷ್ಮನೇ ಇದಂ ಮಯಾಪಿ ತುಭ್ಯಂ ಸಮ್ಯಗುಕ್ತಂ– ಇದನ್ನೇ ನಾನೂ ನಿನಗೆ ಚೆನ್ನಾಗಿ ತಿಳಿಸಿರುವೆನು ||೨೨||

ಇಂತು ಶ್ರೀ ಬಾಲಧನ್ವಿ ಜಗ್ಗು ವೆಂಕಟಾಚಾರ್ಯ ಸ್ವಾಮಿ ರಚಿತ
ಸಂಸ್ಕೃತ ವ್ಯಾಖ್ಯಾನದ ಭಾಷಾನುವಾದವು ಅವರ ಪುತ್ರ
ಬಾಲಧನ್ವಿ ಜಗ್ಗು ಸುದರ್ಶನಾಚಾರ್ಯ ರಚಿತ

— ಸಂಪೂರ್ಣಂ —



## ಶ್ರೀ ಬಾಲಧನ್ವಿ ಜಗ್ಗ ವೆಂಕಟಾಚಾರ್ಯ ರಚಿತ ಮುದ್ರಿತ ಗ್ರಂಥಗಳು

1) ಕುವಲಯಾನಂದ ಚಂದ್ರಿಕಾ ಚಕೋರಃ [ವಿಮರ್ಶ ಗ್ರಂಥ] } 7–50
2) ಅಲಂಕಾರತತ್ತ್ವಂ (ಪದ್ಯ) ,,
3) ರಸ ಗಂಗಾಧರ ಮರ್ಮ ಪ್ರಕಾಶ ಮರ್ಮೋದ್ಘಾಟನಂ ,, 0–38
4) ದಶಕುಮಾರ ಚರಿತ ವಿಮರ್ಶ ವಿಮರ್ಶ [ಪ್ರೊ. ಕೀತ್. ಖಂಡನ] ಪ್ರತಿ ಮುಗಿದಿದೆ
5) ವಾದಭೂಮಿ ವಿಮರ್ಶ ವಿಮರ್ಶ [ವಾದಭೂಮಿ ಖಂಡನ ಖಂಡನ] ,,
6) ವಿದಿತ ಪದ ವಿಚಾರಃ [ಮಲ್ಲಿನಾಥ ವ್ಯಾಖ್ಯೆಯ ವಿಮರ್ಶೆ] ,,
7) ಯತೀಂದ್ರ ಪ್ರವಣ ಪ್ರಭಾವಃ [ಗದ್ಯ] 2–00
8) ಶ್ರೀಮದ್ ದ್ರಮಿಡೋಪನಿಷತ್ಸಾರ ಸಂಗ್ರಹಃ } 2–25
9) ದಿವ್ಯ ಪ್ರಬಂಧ ಪ್ರಾಮಾಣ್ಯ ಸಮರ್ಥನಂ
10) ಯಮಕಿಂಕರ ಸಂವಾದ ವ್ಯಾಖ್ಯಾನ
11) ,, ಕನ್ನಡಾನುವಾದ
12) ಶ್ರೀಕೃಷ್ಣರಾಜಸಾಗರ ಸೇತುಬಂಧಃ [ಪದ್ಯ] } 0–50
13) ವ್ಯಾಘ್ರತಟಾಕ ಭೂವಿವರ ವರ್ಣನಂ [ಪದ್ಯ]
14) ಯದುಕುಲ ಯದುಶೈಲ ಸಂಬಂಧಃ [ಪದ್ಯ ಕನ್ನಡಾನುವಾದ ಸಹಿತ]
15) ಶ್ರೀಯಾದವಗಿರಿ ಮಾಹಾತ್ಮ್ಯ ಸಂಗ್ರಹ 0–38
16) ಭಾರತ ಕೃಷ್ಣ ಮಂಗಳಂ
17) ಶ್ರೀಯತಿರಾಜ ಮಂಗಳಂ [ಪದ್ಯ]
18) ವರಾಹ ನರಸಿಂಹ ವಾಮನ ವಿಷ್ಣು ಸುದರ್ಶನ ಮಂಗಳಾನಿ [ಪದ್ಯ]

*Copies can be had off :*

**Baladhanvi Jaggu Sudarsanacharya,**
**Sahitya Vedanta Vidwan**
**'BHAKTIVILAS'**
**Melkote, Post, Mandya District,**
**Mysore State.**